KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೮೩ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಆಡಳಿತಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 04.05.2009.

2. ಸರ್ಕಾರದ ಪತ್ರ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 20.05.2009.

3. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲಾ ಪಂಚಾಯತಿ ಇವರ ಪತ್ರ ಸಂ. ಬೆಂಜಿಪಂ:ಪರಿಷತ್:09–10, ದಿನಾಂಕ 13.07.2009.

**ಪ್ರಸ್ತಾವನೆ :–**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 177(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ರಾಜ್ಯದ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿಗೊಳಿಸಿ ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಅಧಿಸೂಚನೆಯನ್ನು ಪ್ರಶ್ನಿಸಿ ಹಲವಾರು ಜಿಲ್ಲಾ ಪಂಚಾಯತಿ ಸದಸ್ಯರುಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯ ವಿಚಾರಣೆ ಸಂದರ್ಭದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಗೆ ತಡೆಯಾಜ್ಞೆ ನೀಡಿರುವುದರಿಂದ, ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಚುನಾವಣೆ ನಡೆದಿರುವುದಿಲ್ಲ.

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಅವಧಿ ಮುಗಿದ ನಂತರ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 179(6)ರ ಅನ್ವಯ ಜಿಲ್ಲಾ ಪಂಚಾಯತ್‌ನ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಅಧ್ಯಕ್ಷರನ್ನು ಜಿಲ್ಲಾ ಪಂಚಾಯತಿ ಅಧ್ಯಕ್ಷರ ಕಾರ್ಯಭಾರವನ್ನು ನಿರ್ವಹಿಸಲು ಸೂಚನೆ ನೀಡಲಾಗಿತ್ತು. ಅಲ್ಲದೆ, ಸ್ಥಾಯಿ ಸಮಿತಿಗಳ ಅವಧಿ ಮುಗಿಯುವ ಮುನ್ನ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 186 ರಲ್ಲಿರುವಂತೆ ಕ್ರಮ ವಹಿಸಲು ಸಹ ತಿಳಿಸಲಾಗಿತ್ತು.

ಬೆಂಗಳೂರು ನಗರ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮೇಲೆ ಓದಲಾದ (3)ರ ಪತ್ರದಲ್ಲಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರ ಅವಧಿಯೂ ಸಹ ದಿನಾಂಕ 13.07.2009 ರಂದು ಮುಕ್ತಾಯವಾಗಿರುವುದರಿಂದ, ಸ್ಥಾಯಿ ಸಮಿತಿಗಳನ್ನು ಸಹ ಪುನರ್‌ರಚಿಸಿಲ್ಲದಿರುವುದರಿಂದ, ಮುಂದಿನ ಕ್ರಮದ ಬಗ್ಗೆ ಸರ್ಕಾರದ ಮಾರ್ಗದರ್ಶನ ಕೋರಿರುತ್ತಾರೆ.

ಹಾಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ ಕುರಿತು ತಡೆಯಾಜ್ಞೆ ಇರುವುದರಿಂದ ಮತ್ತು ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಬೆಂಗಳೂರು ನಗರ ಜಿಲ್ಲಾ

ಪಂಚಾಯತಿ ಇವರು ತಿಳಿಸಿರುವಂತೆ, ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯ ಅವಧಿಯೂ ಸಹ ಮುಗಿದಿರುವುದರಿಂದ, ಇಂತಹ ವಿಶೇಷ ಸಂದರ್ಭದಲ್ಲಿ ಯಾವ ಕ್ರಮ ವಹಿಸಬೇಕೆಂದು ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರಲ್ಲಿ ಉಲ್ಲೇಖವಿಲ್ಲದಿರುವುದರಿಂದ ಮತ್ತು ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿನ ಅವಕಾಶವನ್ನು ಬಳಸಿಕೊಳ್ಳುವುದು ಅನಿವಾರ್ಯವಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ 132 ಜಿಪಸ 2009, ಬೆಂಗಳೂರು, ದಿನಾಂಕ 16ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿಲ್ಲಾ ಪಂಚಾಯತಿಗೆ ಅಧ್ಯಕ್ಷ/ಉಪಾಧ್ಯಕ್ಷರು ಅಥವಾ ಸ್ಥಾಯಿ ಸಮಿತಿಗಳು ಪುನರ್‌ರಚನೆಯಾಗಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರು ಆಯ್ಕೆಯಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ, ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದರಾಜು**
ನಿರ್ದೇಶಕರು (ಪಂ.ರಾಜ್) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೪ |
|---|---|---|


**ಕರ್ನಾಟಕ ಸರ್ಕಾರದ ನಡವಳಿಗಳು**

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ಆಡಳಿತಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 04.05.2009.
2. ಸರ್ಕಾರದ ಪತ್ರ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 20.05.2009.
3. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಇವರ ಪತ್ರ ಸಂ. ಬೆಂಗ್ರಾಜಿಪಂ:ಪಶಾ:ಸಿಆರ್:1:09–10, ದಿನಾಂಕ 06.06.2009.

**ಪ್ರಸ್ತಾವನೆ :–**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 177(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ರಾಜ್ಯದ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿಗೊಳಿಸಿ ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಅಧಿಸೂಚನೆಯನ್ನು ಪ್ರಶ್ನಿಸಿ ಹಲವಾರು ಜಿಲ್ಲಾ ಪಂಚಾಯತಿ ಸದಸ್ಯರುಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯ ವಿಚಾರಣೆ ಸಂದರ್ಭದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಗೆ ತಡೆಯಾಜ್ಞೆ ನೀಡಿರುವುದರಿಂದ, ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಚುನಾವಣೆ ನಡೆದಿರುವುದಿಲ್ಲ.

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಅವಧಿ ಮುಗಿದ ನಂತರ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 179(6)ರ ಅನ್ವಯ ಜಿಲ್ಲಾ ಪಂಚಾಯತ್‌ನ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಅಧ್ಯಕ್ಷರನ್ನು ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಕಾರ್ಯಭಾರವನ್ನು ನಿರ್ವಹಿಸಲು ಸೂಚನೆ ನೀಡಲಾಗಿತ್ತು. ಅಲ್ಲದೆ, ಸ್ಥಾಯಿ ಸಮಿತಿಗಳ ಅವಧಿ ಮುಗಿಯುವ ಮುನ್ನ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 186 ರಲ್ಲಿರುವಂತೆ ಕ್ರಮ ವಹಿಸಲು ಸಹ ತಿಳಿಸಲಾಗಿತ್ತು.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮೇಲೆ ಓದಲಾದ (3)ರ ಪತ್ರದಲ್ಲಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರ ಅವಧಿಯೂ ಸಹ ದಿನಾಂಕ 07.06.2009 ರಂದು

ಮುಕ್ತಾಯವಾಗಲಿದ್ದು, ಸ್ಥಾಯಿ ಸಮಿತಿಗಳನ್ನು ಸಹ ಪುನರ್‌ರಚಿಸಿಲ್ಲದಿರುವುದರಿಂದ, ಮುಂದಿನ ಕ್ರಮದ ಬಗ್ಗೆ ಸರ್ಕಾರದ ಮಾರ್ಗದರ್ಶನ ಕೋರಿರುತ್ತಾರೆ.

ಹಾಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ ಕುರಿತು ತಡೆಯಾಜ್ಞೆ ಇರುವುದರಿಂದ ಮತ್ತು ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಇವರು ತಿಳಿಸಿರುವಂತೆ, ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯ ಅವಧಿಯೂ ಸಹ ಮುಗಿದಿರುವುದರಿಂದ, ಇಂತಹ ವಿಶೇಷ ಸಂದರ್ಭದಲ್ಲಿ ಯಾವ ಕ್ರಮ ವಹಿಸಬೇಕೆಂದು ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರಲ್ಲಿ ಉಲ್ಲೇಖವಿಲ್ಲದಿರುವುದರಿಂದ ಮತ್ತು ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿನ ಅವಕಾಶವನ್ನು ಬಳಸಿಕೊಳ್ಳುವುದು ಅನಿವಾರ್ಯವಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ 132 ಜಿಪಸ 2009, ಬೆಂಗಳೂರು, ದಿನಾಂಕ 9ನೇ ಜೂನ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 08.06.2009 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿಲ್ಲಾ ಪಂಚಾಯತಿಗೆ ಅಧ್ಯಕ್ಷ/ಉಪಾಧ್ಯಕ್ಷರು ಅಥವಾ ಸ್ಥಾಯಿ ಸಮಿತಿಗಳು ಪುನರ್‌ರಚನೆಯಾಗಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರು ಆಯ್ಕೆಯಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದರಾಜು**
ನಿರ್ದೇಶಕರು (ಪಂ.ರಾಜ್) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೫ |
|---|---|---|


**ಕರ್ನಾಟಕ ಸರ್ಕಾರದ ನಡವಳಿಗಳು**

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಆಡಳಿತಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 04.05.2009.
2. ಸರ್ಕಾರದ ಪತ್ರ ಸಂ. ಗ್ರಾಅಪ 82 ಜಿಪಸ 2009, ದಿನಾಂಕ 20.05.2009.
3. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಗುಲ್ಬರ್ಗಾ ಜಿಲ್ಲಾ ಪಂಚಾಯತಿ ಇವರ ಪತ್ರ ಸಂ. ಜಿಪಗು:ಪಕಾ:ಸ್ಥಾಸಚು:30:2009–10, ದಿನಾಂಕ 16.07.2009.

**ಪ್ರಸ್ತಾವನೆ :–**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 177(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ರಾಜ್ಯದ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿಗೊಳಿಸಿ ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಅಧಿಸೂಚನೆಯನ್ನು ಪ್ರಶ್ನಿಸಿ ಹಲವಾರು ಜಿಲ್ಲಾ ಪಂಚಾಯತಿ ಸದಸ್ಯರುಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯ ವಿಚಾರಣೆ ಸಂದರ್ಭದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಗೆ ತಡೆಯಾಜ್ಞೆ ನೀಡಿರುವುದರಿಂದ, ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಚುನಾವಣೆ ನಡೆದಿರುವುದಿಲ್ಲ.

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಅವಧಿ ಮುಗಿದ ನಂತರ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 179(6)ರ ಅನ್ವಯ ಜಿಲ್ಲಾ ಪಂಚಾಯತ್‌ನ ಸಾಮಾಜಿಕ ನ್ಯಾಯ

ಸ್ಥಾಯಿ ಸಮಿತಿಯ ಅಧ್ಯಕ್ಷರನ್ನು ಜಿಲ್ಲಾ ಪಂಚಾಯತಿ ಅಧ್ಯಕ್ಷರ ಕಾರ್ಯಭಾರವನ್ನು ನಿರ್ವಹಿಸಲು ಸೂಚನೆ ನೀಡಲಾಗಿತ್ತು. ಅಲ್ಲದೆ, ಸ್ಥಾಯಿ ಸಮಿತಿಗಳ ಅವಧಿ ಮುಗಿಯುವ ಮುನ್ನ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 186 ರಲ್ಲಿರುವಂತೆ ಕ್ರಮ ವಹಿಸಲು ಸಹ ತಿಳಿಸಲಾಗಿತ್ತು.

ಗುಲ್ಬರ್ಗಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮೇಲೆ ಓದಲಾದ (3)ರ ಪತ್ರದಲ್ಲಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರ ಅವಧಿಯೂ ಸಹ ದಿನಾಂಕ 16.07.2009 ರಂದು ಮುಕ್ತಾಯವಾಗಿರುವುದರಿಂದ, ಸ್ಥಾಯಿ ಸಮಿತಿಗಳನ್ನು ಸಹ ಪುನರ್‌ರಚಿಸಿಲ್ಲದಿರುವುದರಿಂದ, ಮುಂದಿನ ಕ್ರಮದ ಬಗ್ಗೆ ಸರ್ಕಾರದ ಮಾರ್ಗದರ್ಶನ ಕೋರಿರುತ್ತಾರೆ.

ಹಾಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ ಕುರಿತು ತಡೆಯಾಜ್ಞೆ ಇರುವುದರಿಂದ ಮತ್ತು ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಗುಲ್ಬರ್ಗಾ ಜಿಲ್ಲಾ ಪಂಚಾಯತಿ ಇವರು ತಿಳಿಸಿರುವಂತೆ, ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯ ಅವಧಿಯೂ ಸಹ ಮುಗಿದಿರುವುದರಿಂದ, ಇಂತಹ ವಿಶೇಷ ಸಂದರ್ಭದಲ್ಲಿ ಯಾವ ಕ್ರಮ ವಹಿಸಬೇಕೆಂದು ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರಲ್ಲಿ ಉಲ್ಲೇಖವಿಲ್ಲದಿರುವುದರಿಂದ ಮತ್ತು ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿನ ಅವಕಾಶವನ್ನು ಬಳಸಿಕೊಳ್ಳುವುದು ಅನಿವಾರ್ಯವಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ 132 ಜಿಪಸ 2009, ಬೆಂಗಳೂರು, ದಿನಾಂಕ 17ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿಲ್ಲಾ ಪಂಚಾಯತಿಗೆ ಅಧ್ಯಕ್ಷ/ಉಪಾಧ್ಯಕ್ಷರು ಅಥವಾ ಸ್ಥಾಯಿ ಸಮಿತಿಗಳು ಪುನರ್‌ರಚನೆಯಾಗಿ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ ಅಧ್ಯಕ್ಷರು ಆಯ್ಕೆಯಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ, ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದರಾಜು**
ನಿರ್ದೇಶಕರು (ಪಂ.ರಾಜ್) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೬ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಜ್ಯದ ತಾಲ್ಲೂಕು ಪಂಚಾಯತಿಗಳಿಗೆ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ. ಗ್ರಾಅಪ 83 ಜಿಪಸ 2009, ದಿನಾಂಕ: 05.05.2009, 13,05.2009, 15.05.2009 ಮತ್ತು 02.06.2009.

2. ಸರ್ಕಾರದ ಪತ್ರ ಸಂ.ಗ್ರಾಅಪ 82 ಜಿಪಸ 2009, ದಿನಾಂಕ 20.05.2009.

**ಪ್ರಸ್ತಾವನೆ :–**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 138(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ರಾಜ್ಯದ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿಗೊಳಿಸಿ ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಅಧಿಸೂಚನೆಯನ್ನು ಪ್ರಶ್ನಿಸಿ ಹಲವಾರು ತಾಲ್ಲೂಕು ಪಂಚಾಯತಿ ಸದಸ್ಯರುಗಳು ಮಾನ್ಯ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ. ಸದರಿ

ರಿಟ್ ಅರ್ಜಿಯ ವಿಚಾರಣೆ ಸಂದರ್ಭದಲ್ಲಿ ಮಾನ್ಯ ನ್ಯಾಯಾಲಯವು ಹಲವಾರು ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಗೆ ತಡೆಯಾಜ್ಞೆ ನೀಡಿರುವುದರಿಂದ, ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ/ಉಪಾಧ್ಯಕ್ಷರ ಚುನಾವಣೆ ನಡೆದಿರುವುದಿಲ್ಲ.

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ತಾಲ್ಲೂಕು ಪಂಚಾಯತಿ ಅಧ್ಯಕ್ಷ/ಉಪಾಧ್ಯಕ್ಷರ ಎರಡೂ ಹುದ್ದೆಗಳೂ ತೆರವಾದಾಗ ಕರ್ನಾಟಕ ಪಂ.ರಾಜ್ ಅಧಿನಿಯಮ, 1993ರ ಪ್ರಕರಣ 140(6)ರ ಅನ್ವಯ ತಾಲ್ಲೂಕು ಪಂಚಾಯತಿಗಳಿಗೆ ಸಂಬಂಧಿಸಿದಂತೆ ಕ್ರಮ ವಹಿಸತಕ್ಕದೆಂದು ಹಾಗೂ ಸ್ಥಾಯಿ ಸಮತಿ ಚುನಾವಣೆ/ಪುನರ್ ರಚನೆಯನ್ನು ಪ್ರಕರಣ 148 ರಂತೆ ಕ್ರಮವಹಿಸತಕ್ಕದ್ದೆಂದು ತಿಳಿಸಲಾಗಿದೆ.

ಈತನ್ಮಧ್ಯೆ ಹಲವಾರು ತಾಲ್ಲೂಕು ಪಂಚಾಯತಿಗಳ ಸ್ಥಾಯಿ ಸಮಿತಿಗಳ ಚುನಾವಣೆಗಳು ನ್ಯಾಯಾಲಯದಲ್ಲಿ ವಿಚಾರಣೆ ಬಾಕಿ ಇರುವುದರಿಂದ ಹಾಗೂ ಕಾರಣಾಂತರಗಳಿಂದ ನಡೆದಿರುವುದಿಲ್ಲವೆಂದು ಅಂತಹ ಸಂಧರ್ಭಗಳಲ್ಲಿ ಕೈಗೊಳ್ಳಬಹುದಾದ ಕ್ರಮದ ಕುರಿತಂತೆ ಜಿಲ್ಲಾ ಪಂಚಾಯತಿ/ ತಾಲ್ಲೂಕು ಪಂಚಾಯತಿಗಳಿಂದ ಸ್ಪಷ್ಟೀಕರಣ ಕೋರಿರುವ ಹಿನ್ನೆಲೆಯಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 321 ರಡಿಯಲ್ಲಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 138 ಜಿಪಸ 2009, ಬೆಂಗಳೂರು, ದಿನಾಂಕ: 3ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 321ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಪ್ರಕರಣ 140(6) ಮತ್ತು 148 ರಂತೆ ಕ್ರಮ ಕೈಗೊಳ್ಳದಿರುವ ತಾಲ್ಲೂಕು ಪಂಚಾಯತಿಗಳಲ್ಲಿ, ತಾಲ್ಲೂಕು ಪಂಚಾಯತಿಗಳ ಮೂರನೇ ಅವಧಿಗೆ ಅಧ್ಯಕ್ಷ/ ಉಪಾಧ್ಯಕ್ಷರು ಚುನಾಯಿತರಾಗುವವರೆಗೆ ಅಥವಾ ಸ್ಥಾಯಿ ಸಮಿತಿಗಳು ಪುನರ್‌ರಚನೆಯಾಗುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಯಾ ತಾಲ್ಲೂಕುಗಳ ವ್ಯಾಪ್ತಿಯ ಕಂದಾಯ ಇಲಾಖೆಯ ಉಪವಿಭಾಗಾಧಿಕಾರಿಗಳನ್ನು ಆಯಾ ತಾಲ್ಲೂಕು ಪಂಚಾಯತಿಗಳ ಆಡಳಿತಾಧಿಕಾರಿಗಳನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದರಾಜು**
ನಿರ್ದೇಶಕರು (ಪಂ.ರಾಜ್) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೨ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/195/Bill/2009, Bangalore, Dated : 20th July, 2009**

The following Bill was introduced in Legislative Assembly on 20th July, 2009.

**THE KARNATAKA FOREST (AMENDMENT) BILL, 2009**

**(L.A. Bill No. 26 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

## ಕರ್ನಾಟಕ ಅರಣ್ಯ (ತಿದ್ದುಪಡಿ) ವಿಧೇಯಕ, 2009
## (2009ರ ವಿಧಾನಸಭೆಯ ವಿಧೇಯಕ ಸಂಖ್ಯೆ–26)

ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಅರಣ್ಯ ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 5) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 98ಎ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 5) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ), 98ಎ ಪ್ರಕರಣದ, (3)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

(4) ಎಲ್ಲ ತೆರಿಗೆ ಬಾಕಿಗಳು ಸಂದಾಯವಾಗುವ ಅಥವಾ ವಸೂಲಾಗುವ ದಿನಾಂಕದವರೆಗೆ ವರ್ಷಕ್ಕೆ ಶೇಕಡಾ ಹದಿನೆಂಟರ ದರದಲ್ಲಿ ಬಡ್ಡಿಯನ್ನು ವಿಧಿಸಿ ಸಂಗ್ರಹಿಸತಕ್ಕದ್ದು."

**3. 98ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 98ಬಿ ಪ್ರಕರಣದಲ್ಲಿ (2)ನೇ ಉಪಪ್ರಕರಣದ (ಎ) ಖಂಡದಲ್ಲಿ, "ತೆರಿಗೆ" ಎಂಬ ಪದದ ತರುವಾಯ, "ಮತ್ತು ಬಡ್ಡಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಅರಣ್ಯ ಅಧಿನಿಯಮ 1963ರ 98ಎ ಪ್ರಕರಣದ ಪ್ರಕಾರ ಸಂದಾಯಮಾಡತಕ್ಕ ಅರಣ್ಯ ಅಭಿವೃದ್ಧಿ ತೆರಿಗೆಯನ್ನು ವಿಳಂಬವಾಗಿ ಸಂದಾಯ ಮಾಡಿದಾಗ ಅದರ ಮೇಲೆ ಬಡ್ಡಿಯನ್ನು ವಿಧಿಸುವ ಬಗ್ಗೆ ಈಗ ಯಾವುದೇ ಉಪಬಂಧವಿಲ್ಲ. ಮಾರಾಟ ತೆರಿಗೆ ಹಾಗೂ ಆದಾಯ ತೆರಿಗೆ ಇಲಾಖೆಗಳು ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಾಕಿಗಳನ್ನು ವಿಳಂಬವಾಗಿ ಸಂದಾಯಮಾಡಿದಾಗ ಅದರ ಮೇಲೆ ವರ್ಷಕ್ಕೆ ಶೇಕಡಾ ಇಪ್ಪತ್ನಾಲ್ಕರ ದರದಲ್ಲಿ ಬಡ್ಡಿ ವಿಧಿಸುತ್ತಿವೆ. ಅರಣ್ಯ ಅಭಿವೃದ್ಧಿ ತೆರಿಗೆಯ ಸಂದಾಯವನ್ನು ಕ್ರಮಬದ್ಧಗೊಳಿಸಲು ಕರ್ನಾಟಕ ಅರಣ್ಯ ಅಧಿನಿಯಮ, 1963ರ 98ಎ ಮತ್ತು 98ಬಿ ಪ್ರಕರಣಗಳಿಗೆ ತಿದ್ದುಪಡಿಗಳನ್ನು ಮಾಡಿ ಕಾಲ ಕಾಲಕ್ಕೆ ನಿಯಮಿಸಲಾದ ದರದಲ್ಲಿ ಬಡ್ಡಿಯನ್ನು ವಿಧಿಸಲು ಪ್ರಸ್ತಾವಿಸಲಾಗಿದೆ.

ಸರ್ಕಾರದ ಬಾಕಿಗಳು ಸಕಾಲದಲ್ಲಿ ಸಂದಾಯವಾಗುವಂತೆ ಮತ್ತು ರಾಜ್ಯ ಬೊಕ್ಕಸಕ್ಕೆ ನಿರಂತರವಾಗಿ ಒಂದೇ ರೀತಿಯಲ್ಲಿ ಆದಾಯವು ದೊರೆಯುವಂತೆ ಮಾಡುವುದು ಇದರ ಉದ್ದೇಶವಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಬಿ. ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## ಅನುಬಂಧ

### ಕರ್ನಾಟಕ ಅರಣ್ಯ ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 5)

### ಉದ್ಧೃತ ಭಾಗ

XX XX XX

**98ಬಿ. ಅರಣ್ಯ ಅಭಿವೃದ್ಧಿ ನಿಧಿ.– (1)** XX XX XX

(2) ಈ ಮುಂದಿನವು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಧಿಯ ಭಾಗವಾಗಿರತಕ್ಕದ್ದು, ಎಂದರೆ :-

(ಎ) 98ಎ ಪ್ರಕರಣದ ಅಡಿಯಲ್ಲಿ ವಿಧಿಸಿದ ಮತ್ತು ಸಂಗ್ರಹಿಸಿದ ತೆರಿಗೆ ;

XX XX XX

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**THIRD SESSION**

**THE KARNATAKA FOREST (AMENDMENT) BILL, 2009**

**(L.A. Bill No. 26 of 2009)**

A Bill further to amend the Karnataka Forest Act, 1963.

Whereas it is expedient further to amend the Karnataka Forest Act, 1963 (Karnataka Act 5 of 1964), for the purposes hereinafter appearing;

Be it enacted by the Karnataka State Legislature in the Sixtieth year of the Republic of India as follows:-

**1. Short title and commencement.-** (1) This Act may be called the Karnataka Forest (Amendment) Act, 2009.

(2) It shall come into force at once.

**2. Amendment of section 98A.-** In section 98A of the Karnataka Forest Act, 1963 (Karnataka Act 5 of 1964) (hereinafter referred to as the principal Act), after sub-section (3), the following shall be inserted, namely:-

"(4) There shall be levied and collected interest at the rate of eighteen percent per annum till the date of payment or recovery of all tax dues."

**3. Amendment of section 98B.-** In section 98B of the principal Act, in sub-section (2), in clause (a), after the word "tax", the words "and interest" shall be inserted.

**STATEMENT OF OBJECTS AND REASONS**

At present there is no provision to levy interest on Forest Development Tax as per section 98A of the Karnataka Forest Act, 1963 on belated payment of Forest Development Tax. The Sales Tax and Income Tax Departments are charging interest on Sales Tax and Income Tax @ 24% per annum for belated payment of dues. To regulate the payment of Forest Development Tax, levy of interest at the rates prescribed from time to time is proposed by issue of amendments to section 98A and section 98B of the Karnataka Forest Act, 1963. This is in the interest of timely payment of Government dues and to ensure consistency in the flow of revenue to State Exchequer. The levy of interest will act as a deterent to delayed payment of Forest Development Tax.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**B.S. YEDDYURAPPA**

Chief Minister

**S.B. PATIL**

Secretary

Karnataka Legislative Assembly

**ANNEXURE**

**Extract from the Karnataka Forest Act, 1963 (Karnataka Act 5 of 1964)**

xx xx xx

**98A. Levy of Forest Development Tax.-** (1) xx xx xx

(2) xx xx xx

(3) It is hereby declared that the said tax shall be in addition to and not in lieu of any tax payable in respect of such produce under any other law in force.

xx xx xx

**98B. Forest Development Fund**.- (1) There shall be constituted for the State of Karnataka a Fund called the Karnataka Forest Development Fund.

(2) The following shall from part of the Karnataka Forest Development Fund namely.-

(a) the tax levied and collected under section 98A;

xx xx xx

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೮ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/196/Bill/2009, Bangalore, Dated : 20th July, 2009**

The following Bill was introduced in Legislative Assembly on 20th July, 2009.

**THE BANGALORE WATER SUPPLY AND SEWERAGE**

**(AMENDMENT) BILL, 2009**

**(L.A. Bill No. 27 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ**
**(ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 27)**

ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 36) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ (ತಿದ್ದುಪಡಿ) ಅಧಿನಿಯಮ, 2009** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 72ಎ ಹೊಸ ಪ್ರಕರಣದ ಸೇರ್ಪಡೆ.–** ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಅಧಿನಿಯಮ, 1964ರಲ್ಲಿ (1964ರ ಕರ್ನಾಟಕ ಅಧಿನಿಯಮ 36), 72ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

> **"72ಎ. ಮಳೆ ನೀರು ಸಂಗ್ರಹಣೆ ವ್ಯವಸ್ಥೆಯನ್ನು ಕಲ್ಪಿಸುವ ಹೊಣೆಗಾರಿಕೆ.–** ಪ್ರತಿಯೊಬ್ಬ ಮಾಲೀಕ ಅಥವಾ ಅಧಿಭೋಗದಾರನು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ (ತಿದ್ದುಪಡಿ) ಅಧಿನಿಯಮ, 2009 ಜಾರಿಗೆ ಬಂದ ದಿನಾಂಕದಿಂದ ಒಂಭತ್ತು ತಿಂಗಳುಗಳೊಳಗೆ ವಿನಿಯಮಗಳಲ್ಲಿ ಉಪಬಂಧಿಸಿರುವಂಥ ರೀತಿಯಲ್ಲಿ ಹಾಗೂ ಅಂಥ ಷರತ್ತುಗಳಿಗೊಳಪಟ್ಟು 1200 ಚದರಡಿಗಿಂತ ಕಡಿಮೆ ವಿಸ್ತೀರ್ಣದ್ದಲ್ಲದ ನಿವೇಶನದಲ್ಲಿರುವ ಕಟ್ಟಡದಲ್ಲಿ ಮಳೆ ನೀರು ಸಂಗ್ರಹಣೆಗೆ ಬೇಕಾದ ವ್ಯವಸ್ಥೆ ಕಲ್ಪಿಸತಕ್ಕದ್ದು, ಹಾಗೆ ಮಾಡಲು ತಪ್ಪಿದ್ದಲ್ಲಿ ಮಂಡಳಿಯೇ ಅಂಥ ಮಳೆನೀರು ಸಂಗ್ರಹಣೆ ವ್ಯವಸ್ಥೆ ನಿರ್ಮಾಣ ಮಾಡಿಸಬಹುದು ಮತ್ತು ಸಂದರ್ಭಾನುಸಾರ ಮಾಲೀಕ ಅಥವಾ ಅಧಿಭೋಗದಾರನಿಂದ ಅದರ ಖರ್ಚನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡಬಹುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಅಂತರ್ಜಲವನ್ನು ಸಂರಕ್ಷಿಸಲು ವಾಸಗೃಹಸ್ಥರು ಮಳೆನೀರು ಸಂಗ್ರಹಣೆ ವ್ಯವಸ್ಥೆಯನ್ನು ನಿರ್ಮಿಸುವುದನ್ನು ಕಡ್ಡಾಯಗೊಳಿಸುವುದಕ್ಕಾಗಿ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಅಧಿನಿಯಮ, 1964ನ್ನು ತಿದ್ದುಪಡಿ ಮಾಡುವ ಮೂಲಕ ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ಯಾವುದೇ ಹೆಚ್ಚಿನ ವೆಚ್ಚವು ಉಂಟಾಗುವುದಿಲ್ಲ.

**ಕಟ್ಟಾ ಸುಬ್ರಮಣ್ಯ ನಾಯ್ಡು**
ಅಬಕಾರಿ, ವಾರ್ತಾ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ
ಹಾಗೂ ಬೆಂಗಳೂರು ನೀರು ಸರಬರಾಜು
ಮತ್ತು ಒಳಚರಂಡಿ ಮಂಡಳಿ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**THIRD SESSION**

**THE BANGALORE WATER SUPPLY AND SEWERAGE (AMENDMENT) BILL, 2009**

**(L.A. Bill No. 27 of 2009)**

A Bill further to amend the Bangalore Water Supply and Sewerage Act, 1964.

Whereas, it is expedient to amend the Bangalore Water Supply and Sewerage Act, 1964 (Karnataka Act 36 of 1964) for the purposes hereinafter appearing;

Be it enacted by the Karnataka State Legislature in the sixtieth year of the Republic of India as follows:-

**1. Short title and commencement.-** (1) This Act may be called the Bangalore Water Supply and Sewerage (Amendment) Act, 2009.

(2) It shall come into force at once.

**2. Insertion of new section 72A.-** In the Bangalore Water Supply and Sewerage Act, 1964 (Karnataka Act No. 36 of 1964), after section 72, the following shall be inserted, namely:-

> **"72A. Obligation to provide rain water harvesting structure.-** Every owner or occupier shall provide for rain water harvesting structure within nine months from the date of commencement of the Bangalore Water Supply and Sewerage (Amendment) Act, 2009, in a building having sital area of not less than 1200 square feet in such manner with such conditions as may be provided in the regulations, failing which the Board may cause such rain water harvesting structure and recover the cost from the owner or occupier as arrears of land revenue as the case may be."

**STATEMENT OF OBJECTS AND REASONS**

It is considered necessary to provide for making it mandatory to build rainwater harvesting structure by households in order to preserve the groundwater by amending the Bangalore Water Supply and Sewerage Act, 1964.

Hence, the Bill.

**FINANCIAL MEMORANDUM**

There is no financial implications by the proposed legislative measure.

**KATTA SUBRAMANYA NAIDU**
Minister for Excise, Information,
IT and BT, and B.W.S.S.B.

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೦, ೨೦೦೯ (ಆಷಾಢ ೨೯, ಶಕ ವರ್ಷ ೧೯೩೧) | ನಂ. ೫೪೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/197/Bill/2009, Bangalore, Dated : 20th July, 2009**

The following Bill was introduced in Legislative Assembly on 20th July, 2009.

**THE KARNATAKA CIVIL COURTS (AMENDMENT) BILL, 2009**

**(L.A. Bill No. 28 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**
**ಕರ್ನಾಟಕ ಸಿವಿಲ್ ನ್ಯಾಯಾಲಯಗಳ (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ–28)**

ಕರ್ನಾಟಕ ಸಿವಿಲ್ ನ್ಯಾಯಾಲಯಗಳ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಿವಿಲ್ ನ್ಯಾಯಾಲಯಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 21) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಿವಿಲ್ ನ್ಯಾಯಾಲಯಗಳ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2, 3, 6, 7, 8, 9, 13, 16, 17, 19, 20, 21, 23, 23ಎ, 24, 25, 26, 27 ಮತ್ತು 28ನೇ ಪ್ರಕರಣಗಳ ತಿದ್ದುಪಡಿ.–** ಕರ್ನಾಟಕ ಸಿವಿಲ್ ನ್ಯಾಯಾಲಯಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 21) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2, 3, 6, 7, 8, 9, 13, 16, 17, 19, 20, 21, 23, 23ಎ, 24, 25, 26, 27 ಮತ್ತು 28ನೇ ಪ್ರಕರಣಗಳಲ್ಲಿ,–

(i) "ಸಿವಿಲ್ ನ್ಯಾಯಾಧೀಶ (ಹಿರಿಯ ವಿಭಾಗ)", ಎಂಬ ಪದಗಳಿಗೆ "ಹಿರಿಯ ಸಿವಿಲ್ ನ್ಯಾಯಾಧೀಶ" ಎಂಬ ಪದಗಳನ್ನು ಮತ್ತು "ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯ" ಎಂಬ ಪದಗಳಿಗೆ "ಹಿರಿಯ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) "ಸಿವಿಲ್ ನ್ಯಾಯಾಧೀಶ (ಕಿರಿಯ ವಿಭಾಗ) ಎಂಬ ಪದಗಳಿಗೆ "ಸಿವಿಲ್ ನ್ಯಾಯಾಧೀಶ" ಎಂಬ ಪದಗಳನ್ನು ಮತ್ತು "ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ನ್ಯಾಯಾಲಯ" ಎಂಬ ಪದಗಳಿಗೆ "ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 30ಎ ಮತ್ತು 30ಬಿ ಪ್ರಕರಣಗಳ ಪ್ರತ್ಯಾಯೋಜನೆ.–** ಮೂಲ ಅಧಿನಿಯಮದ 30ಎ ಮತ್ತು 30ಬಿ ಪ್ರಕರಣಗಳಿಗೆ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

**"30ಎ. ಪ್ರಸ್ತುತ ಜಾರಿಯಲ್ಲಿರುವ ಕೆಲವು ಕಾನೂನುಗಳಲ್ಲಿರುವ ಪದಾವಳಿಗಳಿಗೆ "ಹಿರಿಯ ಸಿವಿಲ್ ನ್ಯಾಯಾಧೀಶರು", "ಸಿವಿಲ್ ನ್ಯಾಯಾಧೀಶರು", "ಹಿರಿಯ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ", "ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಎಂಬ ಪದಾವಳಿಗಳ ಪ್ರತ್ಯಾಯೋಜನೆ.–** ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಜಾರಿಯಲ್ಲಿರುವ ಯಾವುದೇ ಕಾನೂನು ಅಥವಾ ಅದರಡಿಯಲ್ಲಿ ರಚಿಸಿದ ನಿಯಮ, ಅಧಿಸೂಚನೆ ಅಥವಾ ಆದೇಶಗಳಲ್ಲಿ ಈ ಕೆಳಗಿನ ಕೋಷ್ಟಕದಲ್ಲಿ (1)ನೇ ಅಂಕಣದಲ್ಲಿರುವ ಪದಾವಳಿಗಳಿಗೆ (2)ನೇ ಅಂಕಣದಲ್ಲಿರುವ ಸಂವಾದಿ ನಮೂದುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಅಂಕಣ 1 | ಅಂಕಣ 2 |
|---|---|
| ಸಿವಿಲ್ ನ್ಯಾಯಾಲಯದ ನ್ಯಾಯಾಧೀಶರು ಅಥವಾ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ ಅಥವಾ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯ | ಹಿರಿಯ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ |
| ಸಿವಿಲ್ ನ್ಯಾಯಾಧೀಶರು ಅಥವಾ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) | ಹಿರಿಯ ಸಿವಿಲ್ ನ್ಯಾಯಾಧೀಶರು |
| ಮುನ್ಸಿಫ್ ಅಥವಾ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) | ಸಿವಿಲ್ ನ್ಯಾಯಾಧೀಶರು |
| ಮುನ್ಸೀಫ್‌ರ ನ್ಯಾಯಾಲಯ ಅಥವಾ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ (ಕಿರಿಯ ವಿಭಾಗ) | ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ |

**30ಬಿ. ಯಾವುದೇ ತೀರ್ಪು ಮತ್ತು ಡಿಕ್ರಿ ಮುಂತಾದುವುಗಳಲ್ಲಿ ಸಿವಿಲ್ ನ್ಯಾಯಾಲಯ, ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ ಅಥವಾ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ(ಹಿರಿಯ ವಿಭಾಗ), ಮುನ್ಸಿಫ್ ಮತ್ತು ಮುನ್ಸಿಫ್‌ರ ನ್ಯಾಯಾಲಯ, ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ನ್ಯಾಯಾಲಯ ಇವುಗಳ ಉಲ್ಲೇಖಗಳನ್ನು ಅರ್ಥೈಸುವುದು.–** ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಕರ್ನಾಟಕ ಸಿವಿಲ್ ನ್ಯಾಯಾಲಯಗಳ(ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು ಯಾವುದೇ ತೀರ್ಪು, ಡಿಕ್ರಿ, ಆದೇಶ ಅಥವಾ ಇತರ ಲಿಖಿತಗಳಲ್ಲಿ,–

(i) "ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ)", ಎಂಬ ಪದಗಳನ್ನು "ಹಿರಿಯ ಸಿವಿಲ್ ನ್ಯಾಯಾಧೀಶ" ಎಂಬುದಾಗಿ ಅರ್ಥೈಸತಕ್ಕದ್ದು ಮತ್ತು "ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಅಥವಾ "ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯ" ಎಂಬ ಪದಗಳನ್ನು "ಹಿರಿಯ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಎಂಬುದಾಗಿ ಅರ್ಥೈಸತಕ್ಕದ್ದು.

(ii) "ಮುನ್ಸೀಫ್" "ಸಿವಿಲ್ ನ್ಯಾಯಾಧೀಶರು(ಕಿರಿಯ ವಿಭಾಗ)" ಎಂಬ ಪದಗಳನ್ನು "ಸಿವಿಲ್ ನ್ಯಾಯಾಧೀಶರು" ಎಂದು ಮತ್ತು "ಮುನ್ಸೀಫ್‌ರ ನ್ಯಾಯಾಲಯ", "ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ನ್ಯಾಯಾಲಯ" ಎಂಬುದನ್ನು "ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ" ಎಂಬುದಾಗಿ ಅರ್ಥೈಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಮೊದಲ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗವು, ಅಧಿನಿಯಮಗಳು, ನಿಯಮಗಳು, ವಿನಿಯಮಗಳು, ಸುತ್ತೋಲೆಗಳು ಇತ್ಯಾದಿಗಳಲ್ಲಿ ಉಲ್ಲೇಖಿತವಾಗಿರುವ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಎಂಬ ಪದಾವಳಿಗಳಿಗೆ ಅವಶ್ಯ ತಿದ್ದುಪಡಿಗಳನ್ನು ಮಾಡುವಂತೆ ಉಚ್ಚ ನ್ಯಾಯಾಲಯಗಳು ಮತ್ತು ರಾಜ್ಯ ಸರ್ಕಾರಗಳು ಅಥವಾ ಕೇಂದ್ರಾಡಳಿತ ಪ್ರದೇಶಗಳ ಸರ್ಕಾರಗಳನ್ನು ಕೋರಿಕೊಂಡಿರುತ್ತದೆ. ಆದ್ದರಿಂದ ಮೇಲಿನ ಶಿಫಾರಸ್ಸುಗಳನ್ನು ಜಾರಿಗೊಳಿಸುವುದಕ್ಕಾಗಿ ಕರ್ನಾಟಕ ಸಿವಿಲ್ ನ್ಯಾಯಾಲಯಗಳ ಅಧಿನಿಯಮ, 1964ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಕೇವಲ ಪದನಾಮಗಳನ್ನು ಬದಲಾಯಿಸುವುದಕ್ಕೆ ಸಂಬಂಧಿಸಿದುದರಿಂದ ಯಾವುದೇ ಆರ್ಥಿಕ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು
ಸಂಸದೀಯ ವ್ಯವಹಾರಗಳ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

**THE KARNATAKA CIVIL COURTS (AMENDMENT) BILL, 2009**
**(L.A. Bill No. 28 of 2009)**

A Bill further to amend the Karnataka Civil Courts Act, 1964.

Whereas it is expedient further to amend the Karnataka Civil Courts Act, 1964 (Karnataka Act 21 of 1964) for the purposes hereinafter appearing;

Be it enacted by the Karnataka State Legislature in the Sixtieth year of the Republic of India, as follows:-

**1. Short title and commencement.-** (1) This Act may be called the Karnataka Civil Courts (Amendment) Act, 2009.

(2) It shall come into force at once.

**2. Amendment of sections 2, 3, 6,7, 8, 9, 13, 16, 17, 19, 20, 21, 23, 23A, 24, 25, 26, 27 and 28.-** In the Karnataka Civil Courts Act, 1964 (Karnataka Act 21 of 1964) (hereinafter referred to as the Principal Act), in sections 2, 3, 6,7, 8, 9, 13, 16, 17, 19, 20, 21, 23, 23A, 24, 25, 26, 27 and 28,-

(i) for the words "Civil Judge (Senior Division)", the words "Senior Civil Judge" and for the words "Court of a Civil Judge (Senior Division), the words "Court of a Senior Civil Judge" shall be substituted;

(ii) for the words "Civil Judge (Junior Division)", the words " Court of a Civil Judge (Junior Division)", and for the words "Civil Judge" and "Court of a Civil Judge" shall respectively be substituted;

**3. Substitution of sections 30-A and 30-B.-** For section 30-A and 30-B of the Principal Act, the following shall be substituted, namely:-

**"30-A. Substitution of the expressions "Senior Civil Judge", "Civil Judge", "Court of Senior Civil Judge", "Court of Civil Judge", for the expressions in certain laws in force.-** Unless the context otherwise requires, in any law in force or rule, notification or order made thereunder, for the expressions in column (1) below, the expressions in the corresponding entry in column (2) shall be substituted, namely:-

| **Column** | **Column** |
|---|---|
| **(1)** | **(2)** |
| Court of Civil Judge or Civil Judges Court or Court of Civil Judge (Senior Division) | Court of Senior Civil Judge |
| Civil Judge or Civil Judge (Senior Division) | Senior Civil Judge |
| Munsiff or Civil Judge (Junior Division) | Civil Judge |
| Munsiff's Court or Court of Civil Judge (Junior Division) | Court of Civil Judge |

**"30-B. Construction of references to Civil Judge, Court of Civil Judge or Civil Judges Court or Court of Civil Judge (Senior Division), Munsiff and Munsiff's Court, Civil Judge (Junior Division) and Court of Civil Judge (Junior Division) in any judgment and decree etc.,** –unless the context otherwise requires, any reference made to in any judgment, decree, order or other instrument prior to the date of commencement of the Karnataka Civil Courts (Amendment) Act, 2009 to,-

(i) "Civil Judge (Senior Division)" shall be construed as reference to "Senior Civil Judge" and "Court of Civil Judge" or "Civil Judges Court" or "Court of Civil Judges (Senior Division)" shall be construed as reference to "Court of senior Civil Judge";

(ii) "Munsiff" "Civil Judge (Junior Division)" shall be construed as reference to "Civil Judge" and "Munisiff's Court" "Court of Civil Judge (Junior Division)" shall be construed as reference to "Court of Civil Judge".

**STATEMENT OF OBJECTS AND REASONS**

The first National Judicial Pay Commission has requested the High Courts and State Governments/Union Territories Administration to make necessary amendments to the term Civil Judge (Junior Division) and Civil Judge (Senior Division) mentioned in the respective enactments, rules, regulations, circulars etc., Therefore, it is considered necessary to amend the Karnataka Civil Courts Act, 1964, to implement the above recommendations.

Hence, the Bill.

**FINANCIAL MEMORANDUM**

There are no financial implications as the proposal is only to redesignate the posts.

**S. SURESH KUMAR**
Minister for Urban Development, Law
and Parliamentary Affairs

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಮಂಗಳವಾರ, ಜುಲೈ ೨೧, ೨೦೦೯ (ಆಷಾಢ ೩೦, ಶಕ ವರ್ಷ ೧೯೩೧) | ನಂ. ೫೫೦ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ನಗರಾಭಿವೃದ್ಧಿ ಸಚಿವಾಲಯ

ವಿಷಯ: ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವಾರ್ಡಗಳಿಗೆ ವಿವಿಧ ಪ್ರವರ್ಗಗಳ ಮೀಸಲಾತಿಯನ್ನು ಆವರ್ತನೆಯ ಮೇಲೆ ನಿಗಧಿಪಡಿಸುವ ಬಗ್ಗೆ ಮಾರ್ಗಸೂಚಿಗಳು

ಓದಲಾಗಿದೆ:

1. ಸರ್ಕಾರದ ಅಧಿಸೂಚನೆ ಸಂಖ್ಯೆ.ನಅಇ 92 ಎಂಎನ್‌ವೈ 2006 ದಿನಾಂಕ 16.1.2007.
2. ಸರ್ಕಾರದ ಆದೇಶ ಸಂಖ್ಯೆ.ನಅಇ 59 ಎಂಎಲ್‌ಆರ್ 2006 ದಿನಾಂಕ 18.8.2006, 14.8.2007.
3. ಸರ್ಕಾರದ ಅಧಿಸೂಚನೆ ಸಂಖ್ಯೆ.59 ಎಂಎಲ್‌ಆರ್ 2009, ದಿನಾಂಕ 4.6.2009 ಮತ್ತು ಅಧಿಸೂಚನೆ ಸಂಖ್ಯೆ.ನಅಇ 59 ಎಂಎಲ್‌ಆರ್ 2009 (ಭಾ) ದಿನಾಂಕ 16.6.2009.
4. ಕರ್ನಾಟಕ ಮಹಾನಗರ ಪಾಲಿಕೆ ಕಾಯ್ದೆ 1976ರ ತಿದ್ದುಪಡಿ ಅಧಿಸೂಚನೆ ಸಂಖ್ಯೆ.ಸಂವ್ಯಶಾಇ 21 ಶಾಸನ 2009 ದಿನಾಂಕ 4.6.2009.
5. ಸರ್ಕಾರದ ಆದೇಶ ಸಂಖ್ಯೆ.ನಅಇ 82 ಎಂಎಲ್‌ಆರ್ 2007 ದಿನಾಂಕ 7.5.2007 ಮತ್ತು 14.5.2007.

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂಖ್ಯೆ.ನಅಇ 92 ಎಂಎನ್‌ವೈ 2006 ದಿನಾಂಕ 16.1.2007ರ ಆದೇಶದಲ್ಲಿ ಬೆಂಗಳೂರು ಮಹಾನಗರಪಾಲಿಕೆಯ ವ್ಯಾಪ್ತಿಗೆ 7 ನಗರಸಭೆಗಳನ್ನು, 1 ಪುರಸಭೆಯನ್ನು ಹಾಗೂ 110 ನಗರೀಕರಣ ಗ್ರಾಮಗಳನ್ನು ಸೇರಿಸಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನಾಗಿ ಪರಿವರ್ತಿಸಲಾಗಿದೆ.

ಭಾರತ ಸಂವಿಧಾನದ ಅನುಚ್ಛೇದ 243ಟಿ ಪ್ರಕಾರ, 1976ರ ಕರ್ನಾಟಕ ಪೌರನಿಗಮಗಳ ಅಧಿನಿಯಮದ ಪ್ರಕರಣ 7ರ ಉಪಪ್ರಕರಣ (2), (3) ಮತ್ತು (4) ರಲ್ಲಿ

1. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ–ಎ, ಹಿಂದುಳಿದ ವರ್ಗ–ಬಿ ಪ್ರವರ್ಗ ಮತ್ತು ಆಯಾ ಪ್ರವರ್ಗಗಳ ಮಹಿಳೆಯರಿಗೆ ಮೀಸಲಾತಿಯನ್ನು ಮತ್ತು ಉಳಿದ ಮೀಸಲಾತಿಯೇತರ ವಾರ್ಡುಗಳಿಗೆ ಸಾಮಾನ್ಯ ಮತ್ತು ಸಾಮಾನ್ಯ ಮಹಿಳೆ ಪ್ರವರ್ಗದವರಿಗೆ ಲಭ್ಯವಿರಬೇಕೆಂದು ತಿಳಿಸಲಾಗಿದೆ.

2. ಸ್ಥಾನಗಳನ್ನು ಆವರ್ತನೆಯ ಮೇರೆಗೆ ಹಂಚಿಕೆ ಮಾಡತಕ್ಕದ್ದೆಂದು ತಿಳಿಸಲಾಗಿದೆ.

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಾದ ರಿಟ್ ಅರ್ಜಿ ಸಂಖ್ಯೆ.39572/2000 ಸಿ.ಡಬ್ಲ್ಯು 31, 189 ಮತ್ತು 795/2001 (ಎಲ್.ಬಿ–ಪಿ.ಎಲ್.ಐ) ಸಂಬಂಧವಾದ ವಿಚಾರಣೆಯಲ್ಲಿ ಸ್ಥಳೀಯ ಸಂಸ್ಥೆಗಳ ವಾರ್ಡುಗಳಲ್ಲಿ ಆವರ್ತನೆಯ ಮೇಲೆ ವಿವಿಧ ಪ್ರವರ್ಗಗಳಿಗೆ ಸ್ಥಾನಗಳ ಹಂಚಿಕೆ ಬಗ್ಗೆ ಗಮನಿಸಬೇಕಾದ ಮಾರ್ಗಸೂಚಿಗಳನ್ನು ರೂಪಿಸಿದನಂತರವೇ, ಸ್ಥಾನಗಳ ಹಂಚಿಕೆಯ ಕರಡು ಅಧಿಸೂಚನೆಯನ್ನು ಬಾಧಿತರ ಆಕ್ಷೇಪಣೆ/ಸಲಹೆಗಳನ್ನು ಕೋರಿ ಹೊರಡಿಸಬೇಕಾಗುವುದೆಂದು ತಿಳಿಸಿದೆ. ಈ ಹಿನ್ನೆಲೆಯಲ್ಲಿ 2007–08ನೇ ಸಾಲಿನ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಯನ್ನು ನಡೆಸಲು ವಾರ್ಡುವಾರು ಮೀಸಲಾತಿಗಳನ್ನು ನಿಗಧಿಪಡಿಸುವ ಬಗ್ಗೆ ಸರ್ಕಾರವು ಹೊರಡಿಸಿರುವ ಆದೇಶ ಸಂಖ್ಯೆ.ನಅಇ 82 ಎಂಎಲ್‌ಆರ್ 2007, ದಿನಾಂಕ 7.5.2007 ಮತ್ತು 14.5.2007ರಲ್ಲಿನ ಮಾರ್ಗಸೂಚಿಗಳನ್ವಯ ವಾರ್ಡುವಾರು ಮೀಸಲಾತಿಯನ್ನು ನಿಗಧಿಪಡಿಸಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನು ಹೊರತುಪಡಿಸಿ, ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಯನ್ನು ನಡೆಸಲಾಗಿದೆ.

ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆ 1976ರ ಕಲಂ 7(1)ಕ್ಕೆ ತಿದ್ದುಪಡಿ ತಂದು ಅಧಿಸೂಚನೆ ಸಂಖ್ಯೆ.ಸಂವ್ಯಶಾಇ 21 ಶಾಸನ 2009 ದಿನಾಂಕ 4.6.2009ರಲ್ಲಿ ಗರಿಷ್ಠ 200 ವಾರ್ಡುಗಳನ್ನಾಗಿ ವಿಂಗಡಿಸಲು ಅವಕಾಶ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ.ನಅಇ 59 ಎಂಎಲ್‌ಆರ್ 2009 ದಿನಾಂಕ 4.6.2009ರ ಮಾರ್ಗಸೂಚಿಯನ್ವಯ ವಾರ್ಡುಗಳ ಕ್ಷೇತ್ರಗಳ ಮರುವಿಂಗಡನೆ ಕಾರ್ಯವನ್ನು ಕೈಗೊಂಡು ಅದರಂತೆ ಪ್ರಸಕ್ತ 2009ನೇ ಸಾಲಿನಲ್ಲಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಪ್ರಥಮವಾಗಿ ಚುನಾವಣೆ ನಡೆಸುವ ಸಲುವಾಗಿ ವಾರ್ಡುಗಳ ಮೀಸಲಾತಿ ಬಗ್ಗೆ ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ನಅಇ 139 ಎಂಎಲ್‌ಆರ್ 2008 (ಭಾಗ) ಬೆಂಗಳೂರು, ದಿನಾಂಕ 21ನೇ ಜುಲೈ, 2009**

2001ರ ಜನಗಣತಿಯನ್ವಯ ಹಿಂದಿನ ಬೆಂಗಳೂರು ಮಹಾನಗರಪಾಲಿಕೆಯ ವ್ಯಾಪ್ತಿಗೆ 7 ನಗರಸಭೆಗಳನ್ನು, 1 ಪುರಸಭೆಯನ್ನು ಹಾಗೂ 110 ನಗರೀಕರಣ ಗ್ರಾಮಗಳನ್ನು ಸೇರಿಸಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನಾಗಿ ಪರಿವರ್ತಿಸಲಾಗಿದೆ. ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನು 198 ವಾರ್ಡುಗಳನ್ನಾಗಿ ಮರುವಿಂಗಡಿಸಲಾಗಿದೆ. 2001ರ ಜನಗಣತಿಯನ್ವಯ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಒಟ್ಟು ಜನಸಂಖ್ಯೆ.58,40,155 ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆ 6,81,521 ಮತ್ತು ಪರಿಶಿಷ್ಟ ಪಂಗಡದವರ ಜನಸಂಖ್ಯೆ 70,071 ಎಂದು ಗಮನಿಸಿದೆ. ವಾರ್ಡುಗಳ ಮರು ವಿಂಗಡಣೆಯನ್ನು ಸಮಗ್ರವಾಗಿ ಕೈಗೊಂಡಿರುವುದರಿಂದ ಅಂದಿನ ಬೆಂಗಳೂರು ಮಹಾನಗರಪಾಲಿಕೆಯ 1995 ಹಾಗೂ 2001 ಮೀಸಲಾತಿಯ ಆವರ್ತನೆಯನ್ನು ಕೈಗೊಳ್ಳುವುದು ಸಾಧ್ಯವಿಲ್ಲವೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಸರ್ಕಾರದ ಆದೇಶ ಸಂಖ್ಯೆ.ನಅಇ 82 ಎಂಎಲ್‌ಆರ್ 2007 ದಿನಾಂಕ 7.5.2007 ಹಾಗೂ 14.5.2007ರ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ವಿವಿಧ ಪ್ರವರ್ಗಗಳಿಗೆ ಸೇರಿದ ಸದಸ್ಯರಿಗೆ ವಿವಿಧ ವಾರ್ಡುಗಳನ್ನು ಮೀಸಲಾತಿ ಸ್ಥಾನಗಳನ್ನು ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ 198 ವಾರ್ಡುಗಳ ವ್ಯಾಪ್ತಿಯಲ್ಲಿ ನಿಗಧಿಪಡಿಸಲು ಈ ಕೆಳಕಂಡ ಮಾರ್ಗಸೂಚಿಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ವಾರ್ಡುಗಳಿಗೆ ಮೀಸಲಾಗಿಯನ್ನು ನಿಗಧಿಪಡಿಸಿ 2009ನೇ ಸಾಲಿನಲ್ಲಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಚುನಾವಣೆಯನ್ನು ನಡೆಸಲು ತೀರ್ಮಾನಿಸಿದೆ.

1. ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆಯ ಕಲಂ 7(2)ರ ಅನ್ವಯ, ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಒಟ್ಟು ಜನಸಂಖ್ಯೆಯ ಪ್ರಮಾಣದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಹಾಗೂ ಆ ಪ್ರಮಾನದಲ್ಲಿನ ಮೂರನೇ ಒಂದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ನಿಗಧಿಪಡಿಸುವುದು.

2. ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆಯ ಕಲಂ 7(3)ರ ಅನ್ವಯ, ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಒಟ್ಟು 198 ವಾರ್ಡುಗಳಲ್ಲಿ ಮೂರನೇ ಒಂದು ಭಾಗದಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗ–ಎ ಮತ್ತು ಹಿಂದುಳಿದ ವರ್ಗ–ಬಿ ಪ್ರವರ್ಗಗಳಿಗೆ ಮೀಸಲಾತಿಯನ್ನು ನಿಗಧಿಪಡಿಸುವುದು. ಸದರಿ ಕಾಯ್ದೆಯ ಕಲಂ 7(3) ವಿನ ಪರಂತು ಕಲಂ ಅನುಸಾರ ಹಿಂದುಳಿದ ವರ್ಗ ಪ್ರವರ್ಗಕ್ಕೆ ನಿಗಧಿಪಡಿಸಿದ ಸ್ಥಾನಗಳಲ್ಲಿ ಶೇಕಡಾ 80 ಸ್ಥಾನಗಳನ್ನು ಹಿಂದುಳಿದ ವರ್ಗ–ಎ ಪ್ರವರ್ಗಕ್ಕೂ, ಶೇಕಡಾ 20 ಸ್ಥಾನಗಳನ್ನು ಹಿಂದುಳಿದ ವರ್ಗ–ಬಿ ಪ್ರವರ್ಗದವರಿಗೆ ಮೀಸಲಾತಿ ನಿಗಧಿಪಡಿಸುವುದು. ಒಂದು ವೇಳೆ ಹಿಂದುಳಿದ ವರ್ಗ–ಎ ಮೀಸಲಾತಿ ಸ್ಥಾನಗಳಿಗೆ ಅಭ್ಯರ್ಥಿಗಳು ಇಲ್ಲದಿದ್ದರೆ, ಆ ಸ್ಥಾನಗಳನ್ನು ಹಿಂದುಳಿದ ವರ್ಗ–ಬಿ ಪ್ರವರ್ಗದವರಿಂದ ಭರ್ತಿ ಮಾಡಬಹುದಾಗಿದೆ. ಅದೇ ರೀತಿ ಹಿಂದುಳಿದ ವರ್ಗ–ಬಿ ಮೀಸಲಾತಿ ಸ್ಥಾನಗಳಿಗೆ ಆ ಪ್ರವರ್ಗದ ಅಭ್ಯರ್ಥಿಗಳ ಲಭ್ಯವಿಲ್ಲದಿದ್ದರೆ, ಆ ಸ್ಥಾನಗಳನ್ನು ಹಿಂದುಳಿದ ವರ್ಗ–ಎ ಸ್ಥಾನಗಳಿಂದ ಭರ್ತಿಮಾಡಬಹುದಾಗಿದೆ.

3. ಸದರಿ ಕಾಯ್ದೆಯ ಕಲಂ 7(2), 7(3) ಮತ್ತು 7(4) ಅನ್ವಯ ಮೇಲ್ಕಂಡಂತೆ ಎಲ್ಲ ಮೀಸಲಾತಿ ಸ್ಥಾನಗಳನ್ನು ಆವರ್ತನೆಯ ಮೇಲೆ ಪ್ರತಿಯೊಂದು ವರ್ಗದಲ್ಲೂ 1/3ಭಾಗ ಕಡಿಮೆಯಿಲ್ಲದಂತೆ ಸ್ಥಾನಗಳಿಗೆ ಮಹಿಳೆಯರಿಗೆ ಗುರುತಿಸಿಕೊಂಡು ಈ ಕೆಳಕಂಡಂತೆ ಹಂಚಿಕೆ ಮಾಡತಕ್ಕದ್ದು.

4. ಮೇಲೆ ಹೇಳಿದಂತೆ ಮೀಸಲಾತಿಯ ಪ್ರಮಾಣವನ್ನು ಈ ಕೆಳಕಂಡ ಕೋಷ್ಟಕದಂತೆ ನಿಗಧಿಪಡಿಸಿದೆ.

| ಪ್ರವರ್ಗ | ಮೀಸಲಾತಿ ವಿತರಣೆ ಸ್ಥಾನಗಳ ಸಂಖ್ಯೆ |
|---|---|
| ಪರಿಶಿಷ್ಟ ಜಾತಿ | 15 |
| ಪರಿಶಿಷ್ಟ ಜಾತಿ (ಮಹಿಳೆ) | 8 |
| ಪರಿಶಿಷ್ಟ ಪಂಗಡ | 1 |
| ಪರಿಶಿಷ್ಟ ಪಂಗಡ (ಮಹಿಳೆ) | 1 |
| ಹಿಂದುಳಿದ ವರ್ಗ–ಎ (ವ್ಯಕ್ತಿಗಳು) | 35 |
| ಹಿಂದುಳಿದ ವರ್ಗ–ಎ (ಮಹಿಳೆ) | 18 |
| ಹಿಂದುಳಿದ ವರ್ಗ–ಬಿ (ವ್ಯಕ್ತಿಗಳು) | 9 |
| ಹಿಂದುಳಿದ ವರ್ಗ–ಬಿ (ಮಹಿಳೆ) | 4 |
| ಸಾಮಾನ್ಯ ವರ್ಗ | 71 |
| ಸಾಮಾನ್ಯ ವರ್ಗ (ಮಹಿಳೆ) | 36 |

5. ಮೊದಲಿಗೆ ಪರಿಶಿಷ್ಟ ಜಾತಿ ವರ್ಗದವರಿಗೆ ಮೀಸಲಾತಿಯನ್ನು ನಿಗಧಿಪಡಿಸುವಾಗ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವ್ಯಾಪ್ತಿಯಲ್ಲಿ ಬರುವ 23 ವಿಧಾನಸಭಾ ಕ್ಷೇತ್ರಗಳನ್ನು ಪರಿಶಿಷ್ಟ ಜಾತಿಯ ಅತಿ ಹೆಚ್ಚು ಜನಸಂಖ್ಯೆಯ ಆಧಾರದ ಮೇಲೆ ಗುರುತಿಸಿಕೊಂಡು, ಆ ಪ್ರತಿ ಕ್ಷೇತ್ರಗಳಲ್ಲಿನ ಅತಿ ಹೆಚ್ಚು ಪರಿಶಿಷ್ಟ ಜಾತಿ ಜನಸಂಖ್ಯೆಯ ವಾರ್ಡಿಗೆ ಪರಿಶಿಷ್ಟ ಜಾತಿಯ ಮೀಸಲಾತಿಯನ್ನು ನಿಗಧಿಪಡಿಸಲಾಗುತ್ತದೆ. ಈ ಪೈಕಿ 8 ಸ್ಥಾನಗಳನ್ನು ಪರಿಶಿಷ್ಟ ಜಾತಿ ಮಹಿಳೆಯರಿಗೆ ಮೀಸಲಾತಿ ನಿಗಧಿಪಡಿಸಬೇಕಾಗುತ್ತದೆ.

6. ಎರಡನೆಯದಾಗಿ ಪರಿಶಿಷ್ಟ ಪಂಗಡ ವರ್ಗದವರಿಗೆ ಮೀಸಲಾತಿಯನ್ನು ನಿಗಧಿಪಡಿಸುವಾಗ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವ್ಯಾಪ್ತಿಯಲ್ಲಿ ಬರುವ 2 ವಿಧಾನ ಸಭಾ ಕ್ಷೇತ್ರಗಳನ್ನು ಪರಿಶಿಷ್ಟ ಪಂಗಡದ ಅತಿ ಹೆಚ್ಚು ಜನಸಂಖ್ಯೆಯ ಆಧಾರದ ಮೇಲೆ ಗುರುತಿಸಿಕೊಂಡು, ಆ ಪ್ರತಿ ಕ್ಷೇತ್ರಗಳಲ್ಲಿನ ಅತಿ ಹೆಚ್ಚು ಪರಿಶಿಷ್ಟ ಪಂಗಡ ಜನಸಂಖ್ಯೆಯ ವಾರ್ಡಿಗೆ ಪರಿಶಿಷ್ಟ ಪಂಗಡ ಮೀಸಲಾತಿಯನ್ನು ನಿಗಧಿಪಡಿಸಲಾಗುತ್ತದೆ. ಈ ಪೈಕಿ 1 ಸ್ಥಾನವನ್ನು ಪರಿಶಿಷ್ಟ ಪಂಗಡ ಮಹಿಳೆಗೆ ಮೀಸಲಾತಿ ನಿಗಧಿಪಡಿಸಬೇಕಾಗುತ್ತದೆ.

ಈ ಮೇಲೆ ತಿಳಿಸಿರುವಂತೆ 2009ನೇ ಸಾಲಿನಲ್ಲಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವಾರ್ಡುಗಳಿಗೆ ಮೀಸಲಾತಿಯನ್ನು ನಿಗಧಿ ಪಡಿಸಬೇಕಾಗುತ್ತದೆ. ಹಾಗೂ ಮುಂದೆ 2ನೇ ಬಾರಿಗೆ ಮತ್ತು ನಂತರದ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಮಹಾನಗರಪಾಲಿಕೆಗೆ ಚುನಾವಣೆ ನಡೆಸುವಾಗ ಮೀಸಲಾತಿಯನ್ನು ವಾರ್ಡುಗಳಿಗೆ ಆವರ್ತನೆಯ ಮೇಲೆ ಪುನರಾವರ್ತನೆಯಾಗದಂತೆ ನಿಗಧಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಆರ್.ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಮಂಗಳವಾರ, ಜುಲೈ ೨೧, ೨೦೦೯ (ಆಷಾಢ ೩೦, ಶಕ ವರ್ಷ ೧೯೩೧) | ನಂ. ೫೫೧ |
|---|---|---|


**PROCEEDINGS OF THE GOVERNMENT OF KARNATAKA**

**INFRASTRUCTURE DEVELOPMENT SECRETARIAT**

**Sub: Development of State Highway -132 on PPP mode (Sangankallu – Moka Road in Bellary)**

**Ref :**
1. GO letter no :IDD 115 ITS 2008 dtd 8-12-2008
2. Letter no iDeCK/2008-09 1005 dtd 26-12-2008
3. Letter no PIU:KSHIP:SH:132:AE-6:2009-10 dtd 6-4-09 from PD, PIU, KSHIP
4. Meeting proceedings held on 11-6-2009, 19-6-09 under the Chairmanship of Principal Secretary, IDD
5. Letter no: Rev:LAQ:2008-09,dtd 24-6-09 from DC, Bellary
6. Telegram message of DY EE.PR Alur no KBLAB/12

**Preamble:**

1. Bellary is an important district in Southern India & is a major iron ore producing region. Several major industries including iron & steel industries are established in this district. State Highway (SH)-132 in the district of Bellary connects the States of Andhra Pradesh and Karnataka and passes through Greenfield airport proposed at Sangankallu (airport for Bellary). SH-132 would be a main access/ approach road to the proposed Greenfield airport at Bellary (Sangankallu); and the gateway to tourism locations like World Heritage Site of Hampi.

2. Government of Karnataka, through Karnataka State Highways Improvement Project (KSHIP), and Bellary District Administration, has identified the need to develop SH-132 into 4 lane road from Bellary city to AP border in order to ensure smooth movement of traffic, limiting the road stretch running in AP to black topping the existing carriageway/ 2 laning on available right of way (ROW).

3. The project road is a stretch of 29.80 km which includes 26.4 kms of SH-132 from Bellary city to Andhra Pradesh (AP) border (chainage. km 72.45 to chainage. km 98.81) and 3.4 kms from Karnataka State border to Chatra Gudi in the State of Andhra Pradesh (chainage km 0.000 to km 3.4000 of approach road to Moka from Alur to Bellary road from Chatra Gudi Anjaneya Swamy Temple). This stretch in AP, connects Bellary to the State Highway network in Andhra Pradesh, and therefore its development contributes to the viability of the project. The DY EE.PR Alur of AP has permitted to take over the charge of Moka Road in Kurnool Limits.

4. An ROB at LC 114 at Sathyanarayanpet in Bellary city falls on the alignment SH-132. The same is proposed for undertaking by GoK separately in Co-ordination with the Ministry of Railways, GoI.

5. Development of SH-132 is proposed on a Design-Build-Operate-Transfer (DBOT) framework on toll basis, wherein the private developer would construct, operate and manage the project road for a period of 30 years under a Public Private Partnership (PPP) framework.

6. M/s Scott Wilson Kirkpatrick, Project Coordinating Consultants for KSHIP have carried out Technical schedules for the road & M/s iDeCK has carried out the commercial and bid advisory services.

7. The estimated cost of the project is Rs. 358.90 Crores, excluding the cost of land acquisition for the project & cost of utility shifting. The land required is assessed as 64.7 ha (160 acres) at an approximate cost of Rs. 64 crores approximately (cost includes acquisition of land, buildings and R&R that may be required).

8. About 5 acres of land is proposed for commercial activities along the length of the road beyond a distance of 1 km from either sides of the proposed airport site.

9. The Government will acquire land of about 64.7 ha required for the Project. The KSHIP would obtain necessary clearances/permissions/permits in respect of environmental clearances, MoEF, Forest , PCB and any other agency/body/statutory /department & also approval AP for the road length running in AP. Government will make grant to/ receive premium from the concessionaire, as the case may be.

10. The developer will design the project road with utilities shifting under funding of Government, mobilize finances for implementation of the project, Construction of the project road as per pre-specified standards & maintenance the project road during the agreement period. The developer would take necessary approvals of Government through the nodal agency.

11. After considering the above proposal, it has been decided to take up the Development of State Highway -132 on PPP (DBOT) mode on toll basis. (Sangankallu – Moka Road in Bellary & to join AP). Hence this order;

**GOVERNMENT ORDER No. ID /115/ ITS/ 2008 BANGALORE, DATED: 17th July, 2009**

The State Government are pleased to accord,

1. 'In-principle' approval for Development of SH-132 (Sangankallu – Moka Road in Bellary & to join AP) implementation through Private Sector Participation (DBOT).
2. The IDD/KSHIP would concurrently propose the project for VGF from Government of India.
3. The project would be implemented on PPP mode on toll basis .
4. Further sanction is also accorded to the following proposal;
    - i. To make budgetary allocation for the Project to meet the following costs by the IDD:
        - a) To meet the cost of land acquisition and to meet the cost of shifting utilities.
        - b) To undertake the construction of RUB/ROB at LC-114, separately, in co-ordination with Ministry of Railways, GoI.
    - ii. To appoint KSHIP as the Nodal Agency.
    - iii. As Nodal agency, the KSHIP shall perform the following functions:
        - a) The RFQ/RFP, NIT, Concession agreement would be got prepared through iDeCK
        - b) Float tenders for the work.
        - c) Procurement of Concessionaire, Independent Engineer & Statutory Auditor.
        - d) Obtaining clearances from Pollution Control Board, Environmental, forest and any other agencies /departments .
        - e) Preparation of EMP & EIA.
        - f) Preparation of Detailed Project Report.

g) Land acquisition including R & R.

h) Supervising utility shifting by Concessionaire.

iv. To authorize PWD to execute the concession agreement on behalf of Government of Karnataka with the successful bidder.

v. To authorize IDD/KSHIP to carry out further studies, if required and bring specific proposals.

This order issues with the concurrence of

i. PWD vide note para no 43 dtd 24-6-09

ii. FD vide note para no 47 & 48 dtd 24-6-09

By order and in the name of the Governor of Karnataka,
**K.S. Venu Gopal**
Under Secretary to Government
Infrastructure Development Department

# ವಿಶೇಷ ಪತ್ರಿಕೆ

| ಭಾಗ –VI | ಬೆಂಗಳೂರು, ಮಂಗಳವಾರ, ಜುಲೈ ೨೧, ೨೦೦೯ (ಆಷಾಢ ೩೦, ಶಕ ವರ್ಷ ೧೯೩೧) | ನಂ. ೫೫೨ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಅಧಿಸೂಚನೆ**

**ನಂ. ಶಿಜಿನಕೊ:ಸಿಆರ್(3):(ಶಿವಮೊಗ್ಗ)10:2009–10, ದಿನಾಂಕ : 8ನೇ ಜೂನ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178 ಎಂಎಲ್ಆರ್ 2007(2) ದಿನಾಂಕ: 24–01–2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ. ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕ: 23–01–2008 ಮತ್ತು 24–01–2008 ರಂತೆ ಶಿವಮೊಗ್ಗ ನಗರಸಭೆಯ 5ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ ನಿಯಮ 2ಬಿ ಯಂತೆ ಮತ್ತು ಸರ್ಕಾರದ ದಿನಾಂಕ: 13–08–2004ರ ಆದೇಶದಂತೆ ಉಪವಿಭಾಗಾಧಿಕಾರಿ ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು.

ಉಪವಿಭಾಗಾಧಿಕಾರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ದಿನಾಂಕ: 22–02–2008 ರಂದು ನಿಯಮಾನುಸಾರ ಶಿವಮೊಗ್ಗ ನಗರಸಭೆಯ ಅಧ್ಯಕ್ಷರ ಸ್ಥಾನಕ್ಕೆ ಚುನಾವಣೆ ನಡೆಸಿ ಶ್ರೀ ಎಂ. ಶಂಕರ್, 3ನೇ ಅಡ್ಡರಸ್ತೆ, ರವೀಂದ್ರ ನಗರ, ಶಿವಮೊಗ್ಗ ರವರು ಆಯ್ಕೆಯಾಗಿದ್ದು, ನಂತರದಲ್ಲಿ ದಿನಾಂಕ: 04–05–2009 ರಂದು ಸದರಿಯವರು ಈ ಕಛೇರಿಗೆ ರಾಜೀನಾಮೆ ಸಲ್ಲಿಸಿದ್ದರ ಮೇರೆಗೆ, ಈ ಕಛೇರಿ ಆದೇಶ ಸಮ ಸಂಖ್ಯೆ ದಿನಾಂಕ: 14–05–2009ರ ಆದೇಶದಂತೆ, ಶಿವಮೊಗ್ಗ ನಗರಸಭೆಯಲ್ಲಿ ರಾಜೀನಾಮೆಯಿಂದ ತೆರವಾದ ಅಧ್ಯಕ್ಷ ಸ್ಥಾನಕ್ಕೆ ಉಪವಿಭಾಗಾಧಿಕಾರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ದಿನಾಂಕ 28–05–2009 ರಂದು ನಿಯಮಾನುಸಾರ ಚುನಾವಣೆ ನಡೆಸಿ, ಈ ಕೆಳಗಿನಂತೆ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ ಎಂಬ ವರದಿ ನೀಡಿರುತ್ತಾರೆ.

| **ಕ್ರ. ಸಂ.** | **ಚುನಾವಣೆ ನಡೆಸಿದ ಸ್ಥಾನ** | **ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ** | **ಆಯ್ಕೆಯಾದವರ ಹೆಸರು** |
|---|---|---|---|
| 01 | ಶಿವಮೊಗ್ಗ ನಗರಸಭೆಯ ಅಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಎನ್.ಜೆ. ರಾಜಶೇಖರ್, (ಸುಭಾಷ್) ಬಿನ್ ಎನ್.ಹೆಚ್. ಜಂಬಣ್ಣ, ನವಿಲ ಕೃಪ, ಕುವೆಂಪು ರಸ್ತೆ, ಶಿವಮೊಗ್ಗ |

ಕರ್ನಾಟಕ ಮುನ್ಸಿಪಾಲಿಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ ನಿಯಮ 12 ರಂತೆ ಘೋಷಣಾಧಿಕಾರಿಯಾದ ನಾನು ಶ್ರೀ ಎನ್.ಜೆ. ರಾಜಶೇಖರ್, (ಸುಭಾಷ್) ಬಿನ್ ಎನ್.ಹೆಚ್. ಜಂಬಣ್ಣ ಇವರು, ಶಿವಮೊಗ್ಗ ನಗರಸಭೆಯ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ ಎಂದು ಘೋಷಿಸಿದ್ದಾರೆ.

ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಬುಧವಾರ, ಜುಲೈ ೨೨, ೨೦೦೯ (ಆಷಾಢ ೩೧, ಶಕ ವರ್ಷ ೧೯೩೧) | ನಂ. ೫೫೩ |
|---|---|---|


**ELECTION COMMISSION OF INDIA**
Nirvachan Sadan, Ashoka Road, New Delhi – 110001.

Dated: 22nd July, 2009
31 Asadha, 1931 (Saka)

**NOTIFICATION**

No. 100/KT-LA/2/2009: **Whereas,** the seat of **Shri C.P.Yogeshwara** in the Legislative Assembly of the Karnataka State, elected from **185–Channapatna** Assembly Constituency, has become vacant on 30-03-2009, by reason of his resignation; and

2. **Whereas,** a bye – election is to be held for the purpose of filling the vacancy so caused.

3. **Now, therefore,** in pursuance of sub section (1) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

**(A)** **Calls upon** the said 185-Channapatna Assembly Constituency in the State of Karnataka to elect, before the 23rd August, 2009 (Sunday) and in accordance with the provisions of the said Act and of the rules and orders made thereunder, a person, for the purpose of filling the said vacancy in the Legislative Assembly of the State; and

**(B)** **Appoints,** with respect to the said election:-

a) the 29-07-2009 (Wednesday), as the last date for making nominations;

b) the 30-07-2009 (Thursday), as the date for the scrutiny of nominations;

c) the 01-08-2009 (Saturday), as the last date for the withdrawal of candidatures;

d) the 18-08-2009 (Tuesday), as the date, on which a poll shall, if necessary, be taken;

e) the 23-08-2009 (Sunday), as the date before which the election shall be completed, and

**(C)** **Fixes the hours** from **7.00 A.M** to **5.00 P.M,** as the hours during which the poll shall, if necessary, be taken on the date specified above for the election.

By order
**TAPAS KUMAR**
Principal Secretary
Election Commission of India


# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಬುಧವಾರ, ಜುಲೈ ೨೨, ೨೦೦೯ (ಆಷಾಢ ೩೧, ಶಕ ವರ್ಷ ೧೯೩೧) | ನಂ. ೫೫೪ |
|---|---|---|


**ELECTION COMMISSION OF INDIA**
Nirvachan Sadan, Ashoka Road, New Delhi – 110001.

Dated: 22nd July, 2009
31 Asadha, 1931 (Saka)

**NOTIFICATION**

No. 100/KT-LA/3/2009: **Whereas,** the seat of **Shri V. Somanna** in the Legislative Assembly of the Karnataka State, elected from **166–Govindraj Nagar** Assembly Constituency, has become vacant on 04-04-2009, by reason of his resignation ; and

2. **Whereas,** a bye – election is to be held for the purpose of filling the vacancy so caused.

3. **Now, therefore,** in pursuance of sub section (1) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

| ಜಿಲ್ಲಾ ಚುನಾವಣಾ ಅಧಿಕಾರಿಗಳು | ವಿಧಾನಸಭಾ ಕ್ಷೇತ್ರದ ಸಂಖ್ಯೆ ಹಾಗೂ ಹೆಸರು | ಸಂಬಂಧಪಟ್ಟ ವಲಯ ಅಧಿಕ ಜಿಲ್ಲಾ ಚುನಾವಣಾಧಿಕಾರಿಗಳು | ಸಂಬಂಧಪಟ್ಟ ವಾರ್ಡ್ ಸಂಖ್ಯೆ |
|---|---|---|---|
| 1 | 2 | 3 | 4 |
| ಜಿಲ್ಲಾಧಿಕಾರಿ ಗಳು, ಬೆಂಗಳೂರು ನಗರ ಜಿಲ್ಲೆ | 150–ಯಲಹಂಕ | ಅಪರ/ ಜಂಟಿ ಆಯುಕ್ತರು (ಬ್ಯಾಟರಾಯನಪುರ) | 1,2,3,4 |
| | 152–ಬ್ಯಾಟರಾಯನಪುರ | ಅಪರ/ ಜಂಟಿ ಆಯುಕ್ತರು (ಬ್ಯಾಟರಾಯನಪುರ) | 5,6,7,8,9,10,11 |
| | 153–ಯಶವಂತಪುರ | ಅಪರ/ ಜಂಟಿ ಆಯುಕ್ತರು (ರಾಜರಾಜೇಶ್ವರಿನಗರ) | 40,72,130,159,198 |
| | 155–ದಾಸರಹಳ್ಳಿ | ಅಪರ/ ಜಂಟಿ ಆಯುಕ್ತರು (ದಾಸರಹಳ್ಳಿ) | 12,13,14,15,39,41,70,71 |
| | 174–ಮಹದೇವಪುರ | ಅಪರ/ ಜಂಟಿ ಆಯುಕ್ತರು (ಮಹದೇವಪುರ) | 54,82,83,84,85,86,149, 150 |
| | 176–ಬೆಂಗಳೂರು ದಕ್ಷಿಣ | ಅಪರ/ ಜಂಟಿ ಆಯುಕ್ತರು (ಬೊಮ್ಮನಹಳ್ಳಿ) | 184,185,191,192,194,195, 196,197 |
| | 177–ಆನೇಕಲ್ | ಅಪರ/ ಜಂಟಿ ಆಯುಕ್ತರು (ಬೊಮ್ಮನಹಳ್ಳಿ) | --------- |

ಆದೇಶದ ಮೇರೆಗೆ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೦ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಜಲಸಂಪನ್ಮೂಲ ಸಚಿವಾಲಯ (ಸಣ್ಣ ನೀರಾವರಿ)

**ವಿಷಯ :** ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ ವಿಭಾಗ ಕಚೇರಿಯನ್ನು ಪ್ರಾರಂಭಿಸುವ ಬಗ್ಗೆ – ಆದೇಶ.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂ : ಮುಸದ/ಸನೀದವ/ಸಿ.ಶಾ–2/ಸಿ–2/ಗುನಿಉವಿಸ್ರ/08–09/1626 ದಿನಾಂಕ : 22.06.2008
2. ಮಾನ್ಯ ಸಣ್ಣ ನೀರಾವರಿ ಯೋಜನೆ, ಹಾಗೂ ಸಾಂಖ್ಯಿಕ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ : 01.08.2008 ರಂದು ನಡೆದ ಸಭೆಯ ನಡವಳಿಗಳು.
3. ಸರ್ಕಾರದ ಆದೇಶ ಸಂಖ್ಯೆ : ಜಸಂಇ 217 ಸೇಎಸು 2008, ದಿನಾಂಕ : 23.03.2009.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ:22.06.2008ರ ಪತ್ರದಲ್ಲಿ ಸಣ್ಣ ನೀರಾವರಿ ವೃತ್ತ ಬೆಂಗಳೂರು ವ್ಯಾಪ್ತಿಯಲ್ಲಿ ಬರುವ ಶಿವಮೊಗ್ಗದಲ್ಲಿ ಹೊಸದಾಗಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗವನ್ನು ಪ್ರಾರಂಭಿಸಿದಲ್ಲಿ ಶಿವಮೊಗ್ಗ, ಶಿಕಾರಿಪುರ, ಸೊರಬ, ಚಿತ್ರದುರ್ಗ ಮತ್ತು ದಾವಣಗೆರೆ ಉಪ ವಿಭಾಗಗಳ ಕಾಮಗಾರಿಗಳ ಗುಣನಿಯಂತ್ರಣ ಪರೀಕ್ಷೆಗಳನ್ನು ತ್ವರಿತವಾಗಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಬಹುದಾಗಿದ್ದು, ಸದರಿ ಉಪ ವಿಭಾಗವನ್ನು ನಿಷ್ಕ್ರಿಯಗೊಂಡಿರುವ ಯಾವುದಾದರೊಂದು ಉಪ ವಿಭಾಗವನ್ನು ಎನ್ ಬ್ಲಾಕ್ ಆಗಿ ಸ್ಥಳಾಂತರಿಸಿ ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗವನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ(2)ರಲ್ಲಿ ದಿನಾಂಕ:01.08.2008ರಂದು ಮಾನ್ಯ ಸಣ್ಣ ನೀರಾವರಿ ಯೋಜನೆ, ಹಾಗೂ ಸಾಂಖ್ಯಿಕ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ವಿಭಾಗಗಳ ವಿವಿಧ ಯೋಜನೆಗಳ ಸಮೀಕ್ಷಾ ಸಭೆಯಲ್ಲಿ ಶಿವಮೊಗ್ಗದಲ್ಲಿ ಹೊಸದಾಗಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗವನ್ನು ತೆರೆಯುವ ಬಗ್ಗೆ ಮುಖ್ಯ ಇಂಜಿನಿಯರ್‌ರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ತ್ವರಿತವಾಗಿ ಪರಿಶೀಲಸಿ ಸೂಕ್ತ ಆದೇಶ ಹೊರಡಿಸುವಂತೆ ನಿರ್ಣಯಿಸಲಾಗಿದೆ.

ಅದರನ್ವಯ ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗವನ್ನು ತೆರೆಯುವ ಸಲುವಾಗಿ ಬೃಹತ್ ನೀರಾವರಿ ಇಲಾಖೆಯಲ್ಲಿ ಹೆಚ್ಚುವರಿ ಎಂದು ಪರಿಗಣಿಸಿ ನಿಷ್ಕ್ರಿಯಗೊಳಿಸಲು ಉಪ ವಿಭಾಗಗಳಲ್ಲಿ ಒಂದು ಉಪ ವಿಭಾಗವನ್ನು ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ನೀಡುವಂತೆ ಜಲ ಸಂಪನ್ಮೂಲ ಇಲಾಖೆಯನ್ನು ಕೋರಲಾಗಿತ್ತು.

ಜಲಸಂಪನ್ಮೂಲ ಇಲಾಖೆಯು ಮೇಲೆ ಓದಲಾದ ಕ್ರಮಾಂಕ(3)ರ ದಿನಾಂಕ:23.3.2009ರಂದು ಹೊರಿಸಿರುವ ಆದೇಶದಲ್ಲಿ ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗ ಕಚೇರಿಯನ್ನು ತೆರೆಯಲು ಬೃಹತ್ ನೀರಾವರಿ ಇಲಾಖೆಯಲ್ಲಿ ನಿಷ್ಕ್ರಿಯಗೊಳಿಸಿರುವ ನಂ. 6, ಹೆಚ್.ಸಿ.ಐ. ಉಪ ವಿಭಾಗ, ಕಿಬ್ಬನಹಳ್ಳಿ ಕಚೇರಿಯನ್ನು ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ವಹಿಸಿದೆ. ಸದರಿ ಉಪ ವಿಭಾಗ ವೃಂದ ಬಲದೊಂದಿಗೆ ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗ ಕಚೇರಿಯನ್ನು ತೆರೆಯಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 122 ಸೇಸಎ 2008 ಬೆಂಗಳೂರು, ದಿನಾಂಕ : 12ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲಸಂಪನ್ಮೂಲ ಇಲಾಖೆಯಿಂದ ವರ್ಗಾಹಿಸಲಾದ ನಂ. 6, ಹೆಚ್.ಸಿ.ಐ. ಉಪ ವಿಭಾಗ, ಕಿಬ್ಬನಹಳ್ಳಿ ಕಚೇರಿಯನ್ನು ಹಾಗೂ ಅದಕ್ಕೆ ಮಂಜೂರಾದ ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸ್ಥಳಾಂತರಿಸುವ ಮೂಲಕ ಕೂಡಲೇ ಜಾರಿಗೆ ಬರುವಂತೆ ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗ ಕಚೇರಿಯನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಶಿವಮೊಗ್ಗದಲ್ಲಿ ಹೊಸದಾಗಿ ತೆರೆಯಲ್ಪಡುವ ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ ವಿಭಾಗ ಕಚೇರಿಯ ಪೂರಕ ವೃಂದ ಬಲದ ವಿವರಗಳ ಪಟ್ಟಿಯನ್ನು ಅನುಬಂಧ–1ರಲ್ಲಿ ಒದಗಿಸಲಾಗಿದೆ.

ಶಿವಮೊಗ್ಗದಲ್ಲಿ ಹೊಸದಾಗಿ ಪ್ರಾರಂಭಿಸಲಾಗುವ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗದ ಕಾರ್ಯವ್ಯಾಪ್ತಿ, ಕಚೇರಿ/ಪೀಠೋಪಕರಣ ವ್ಯವಸ್ಥೆ, ಸಿಬ್ಬಂದಿ ಭರ್ತಿ ಇತ್ಯಾದಿಗಳ ಬಗ್ಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಕ್ರಮ ಜರುಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಅನುಬಂಧ – 1**

**ಸರ್ಕಾರದ ಆದೇಶ ಸಂಖ್ಯೆ : ಸನೀಇ 122 ಸೇಸಎ 2008 ದಿನಾಂಕ : 12ನೇ ಜೂನ್ 2009**

ಶಿವಮೊಗ್ಗದಲ್ಲಿ ಸಣ್ಣ ನೀರಾವರಿ ಗುಣನಿಯಂತ್ರಣ ಉಪ ವಿಭಾಗದಲ್ಲಿ ಹೊಸದಾಗಿ ಪ್ರಾರಂಭಿಸಲ್ಪಡುವ ಸಿಬ್ಬಂದಿಗಳ ವಿವರ

| ಕ್ರ. ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 |
| 2 | ಸಹಾಯಕ ಇಂಜಿನಿಯರ್ | 5 |
| 3 | ಕಿರಿಯ ಇಂಜಿನಿಯರ್ | 4 |
| 4 | ಪ್ರಥಮ ದರ್ಜೆ ಸಹಾಯಕರು | 1 |
| 5 | ದ್ವಿತೀಯ ದರ್ಜೆ ಸಹಾಯಕರು | 1 |
| 6 | ಬೆರಳಚ್ಚುಗಾರರು | 1 |
| 7 | ಕಾವಲುಗಾರರು | 1 |
| 8 | ಜವಾನರು | 1 |
| 9 | ಮೇಟಿ | 1 |
| 10 | ಸ್ಕ್ಯಾವೆಂಜರ್ | 1 |
| | **ಒಟ್ಟು** | **17** |

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೧ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಜಲಸಂಪನ್ಮೂಲ ಸಚಿವಾಲಯ (ಸಣ್ಣ ನೀರಾವರಿ)**

**ವಿಷಯ :** ಉತ್ತರ ಕನ್ನಡ ಜಿಲ್ಲೆ ಮುಂಡಗೋಡದಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಕಚೇರಿಯನ್ನು ಪ್ರಾರಂಭಿಸುವ ಬಗ್ಗೆ – ಆದೇಶ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂ : ಮುಸದ/ಸನೀಉವ/ಬಿಜಾ/ನಿಬಂಧಕರು/2008/713 ದಿನಾಂಕ : 04.02.2009.
2. ಸರ್ಕಾರದ ಆದೇಶ ಸಂಖ್ಯೆ : ಜಸಂಇ 60 ಸೇಎಸು 2008, ದಿನಾಂಕ : 20.05.2009.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ:04.02.2009ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯು 11 ತಾಲ್ಲೂಕುಗಳನ್ನು ಹೊಂದಿದ್ದು, ಸಣ್ಣ ನೀರಾವರಿ ಯೋಜನೆಗಳ ಉಸ್ತುವಾರಿಗಾಗಿ ಒಂದು ಉಪ ವಿಭಾಗದ ಅಗತ್ಯವಿರುತ್ತದೆಂದೂ, ನಬಾರ್ಡ್/ನಾನ್‌ನಬಾರ್ಡ್‌ಡೇತರ ಹಾಗೂ ವಿಶೇಷ ಘಟಕ ಯೋಜನೆಯಡಿ ಹೆಚ್ಚುವರಿ ಅನುದಾನದ ಲಭ್ಯತೆಯ ಮೇರೆಗೆ ಪ್ರತಿಯೊಂದು ತಾಲ್ಲೂಕಿನಲ್ಲೂ ಹೆಚ್ಚು ಯೋಜನೆಗಳು ಮಂಜೂರಾಗುತ್ತಿದ್ದು, ಹಳಿಯಾಳ ಸಣ್ಣ ನೀರಾವರಿ ವಿಭಾಗದ ಕಾರ್ಯಭಾರವು ಹೆಚ್ಚಿರುವುದರಿಂದ, ಸದರಿ ವಿಭಾಗದಲ್ಲಿ ಮುಂಡಗೋಡ / ಯಲ್ಲಾಪುರ ತಾಲ್ಲೂಕುಗಳಿಗೆ ಮುಂಡಗೋಡ ಕೇಂದ್ರ ಸ್ಥಾನದಲ್ಲಿ ಒಂದು ಸಣ್ಣ ನೀರಾವರಿ ಉಪ ವಿಭಾಗವನ್ನು ಸೃಜಿಸುವಂತೆ ಕೋರಿರುತ್ತಾರೆ.

ಮುಂಡಗೋಡು ಕೇಂದ್ರ ಸ್ಥಾನವನ್ನು ಹೊಂದಿಕೊಂಡಂತೆ ಸಣ್ಣ ನೀರಾವರಿ ಉಪ ವಿಭಾಗವನನ್ನು ಪ್ರಾರಂಭಿಸುವ ಸಲುವಾಗಿ ಜಲಸಂಪನ್ಮೂಲ ಇಲಾಖೆಯಲ್ಲಿ ನಿಷ್ಕ್ರಿಯಗೊಂಡಿರುವ ಯಾವುದಾದರೂ ಉಪ ವಿಭಾಗವನ್ನು ಪುನಶ್ಚೇತನಗೊಳಿಸಿ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ನೀಡುವಂತೆ ಜಲಸಂಪನ್ಮೂಲ ಇಲಾಖೆಯನ್ನು ಕೋರಲಾಗಿತ್ತು.

ಜಲಸಂಪನ್ಮೂಲ ಇಲಾಖೆಯು ಮೇಲೆ ಓದಲಾದ ಕ್ರಮಾಂಕ(2)ರ ಆದೇಶದಲ್ಲಿ ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಹಿತದೃಷ್ಟಿಯಿಂದ ಉತ್ತರ ಕನ್ನಡ ಜಿಲೆ ಮುಂಡಗೋಡ ಮತ್ತು ಯಲ್ಲಾಪುರ ತಾಲ್ಲೂಕುಗಳನ್ನು ಒಳಗೊಂಡಂತೆ ಮುಂಡಗೋಡದಲ್ಲಿ ಸಣ್ಣ ನೀರಾವರಿ ಉಪ ವಿಭಾಗವನ್ನು ತೆರೆಯಲು ಬೃಹತ್ ನೀರಾವರಿ ಇಲಾಖೆಯಲ್ಲಿ ನಿಷ್ಕ್ರಿಯಗೊಳಿಸಿರುವ ನಂ. 2, ಹೆಚ್.ಸಿ.ಡಿ. ಉಪ ವಿಭಾಗ, ತುರುವೇಕೆರೆ ಕಚೇರಿಯನ್ನು ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ವಹಿಸಿರುತ್ತದೆ.

ಸದರಿ ಉಪ ವಿಭಾಗ ವೃಂದ ಬಲದೊಂದಿಗೆ ಮುಂಡಗೋಡದಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಕಚೇರಿಯನ್ನು ತೆರೆಯಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 164 ಸೇಸಎ 2008 ಬೆಂಗಳೂರು, ದಿನಾಂಕ : 12ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲಸಂಪನ್ಮೂಲ ಇಲಾಖೆಯಿಂದ ವರ್ಗಾಹಿಸಲಾದ ನಂ. 2, ಹೆಚ್.ಸಿ.ಡಿ. ಉಪ ವಿಭಾಗ, ತುರುವೇಕೆರೆ ಕಚೇರಿಯನ್ನು ಹಾಗೂ ಅದಕ್ಕೆ ಮಂಜೂರಾದ ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸ್ಥಳಾಂತರಿಸುವ ಮೂಲಕ ಕೂಡಲೇ ಜಾರಿಗೆ ಬರುವಂತೆ ಮುಂಡಗೋಡದಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಕಚೇರಿಯನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮುಂಡಗೋಡದಲ್ಲಿ ಹೊಸದಾಗಿ ತೆರೆಯಲ್ಪಡುವ ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ ವಿಭಾಗ ಕಚೇರಿಯ ಪೂರಕ ವೃಂದ ಬಲದ ವಿವರಗಳ ಪಟ್ಟಿಯನ್ನು ಅನುಬಂಧ–1ರಲ್ಲಿ ಒದಗಿಸಲಾಗಿದೆ.

ಹೊಸದಾಗಿ ಪ್ರಾರಂಭಿಸಲಾಗುವ ಮುಂಡಗೋಡ ಉಪ ವಿಭಾಗದ ಕಾರ್ಯವ್ಯಾಪ್ತಿ, ಕಚೇರಿ/ಪೀಠೋಪಕರಣ ವ್ಯವಸ್ಥೆ, ಸಿಬ್ಬಂದಿ ಭರ್ತಿ ಇತ್ಯಾದಿಗಳ ಬಗ್ಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರು ಕ್ರಮ ಜರುಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಅನುಬಂಧ – 1**

**ಸರ್ಕಾರದ ಆದೇಶ ಸಂಖ್ಯೆ : ಸನೀಇ 164 ಸೇಸಎ 2008 ದಿನಾಂಕ : 12ನೇ ಜೂನ್ 2009**

ಮುಂಡಗೋಡದಲ್ಲಿ ಹೊಸದಾಗಿ ಪ್ರಾರಂಭಿಸಲ್ಪಡುವ ಸಣ್ಣ ನೀರಾವರಿ ಉಪ ವಿಭಾಗದ ಸಿಬ್ಬಂದಿಗಳ ವಿವರ

| ಕ್ರ. ಸಂ. | **ಹುದ್ದೆಗಳ ಪದನಾಮ** | **ಹುದ್ದೆಗಳ ಸಂಖ್ಯೆ** |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 |
| 2 | ಸಹಾಯಕ ಇಂಜಿನಿಯರ್ | 5 |
| 3 | ಕಿರಿಯ ಇಂಜಿನಿಯರ್ | 4 |
| 4 | ಪ್ರಥಮ ದರ್ಜೆ ಸಹಾಯಕರು | 1 |
| 5 | ದ್ವಿತೀಯ ದರ್ಜೆ ಸಹಾಯಕರು | 2 |
| 6 | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು | 1 |
| 7 | ದ್ವಿತೀಯ ದರ್ಜೆ ಭೂಮಾಪಕರು | 1 |
| 8 | ಬೆರಳಚ್ಚುಗಾರರು | 1 |
| 9 | ಕಾವಲುಗಾರರು | 1 |
| 10 | ಜವಾನರು | 2 |
| 11 | ಚಾಲಕರು | 1 |
| 12 | ಕ್ಲೀನರ್ | 1 |
| | **ಒಟ್ಟು** | **21** |

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೨ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು
## ಕಂದಾಯ ಸಚಿವಾಲಯ

**ವಿಷಯ :** ಗಂಗಾನಗರ ಉಪ ನೋಂದಣಿ ಕಛೇರಿ ಕಾರ್ಯ ನಿರ್ವಹಿಸಲು ಖಾಸಗಿ ಕಟ್ಟಡದ ಬಾಡಿಗೆಯನ್ನು ನಿಗಧಿಪಡಿಸುವ ಕುರಿತು

**ಓದಲಾಗಿದೆ :** ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ : ಬಿಎಲ್‌ಡಿ 34/2007–08, ದಿನಾಂಕ : 18.03.2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 18.03.2009 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಸರ್ಕಾರವು ಅಧಿಕ ಕೆಲಸದ ಒತ್ತಡವಿರುವ ಉಪ ನೋಂದಣಿ ಕಛೇರಿಗಳನ್ನು ವಿಭಜಿಸಿ ಆದೇಶಿಸಿದ್ದು, ಗಂಗಾನಗರ ಉಪ ನೋಂದಣಿ ಕಛೇರಿ ಕಾರ್ಯನಿರ್ವಹಿಸಲು ಶ್ರೀಮತಿ ರುಕ್ಮಿಣಮ್ಮ ಕೋಂ ಆರ್. ಕೃಷ್ಣಪ್ಪ ಇವರ ಒಡೆತನಕ್ಕೆ ಸೇರಿದ ನಂ. 70, 5ನೇ ಮುಖ್ಯರಸ್ತೆ, ಗಂಗಾನಗರ, ಬೆಂಗಳೂರು – 32 ಇಲ್ಲಿನ ಖಾಸಗಿ ಕಟ್ಟಡವು ಕಛೇರಿ ಕಾರ್ಯ ನಿರ್ವಹಿಸಲು ಸೂಕ್ತವಾಗಿರುವುದು ಜಿಲ್ಲಾ ನೋಂದಣಾಧಿಕಾರಿಗಳು, ಗಾಂಧಿನಗರ ನೋಂದಣಿ ಜಿಲ್ಲೆ ಇವರು ಶಿಫಾರಸ್ಸು ಮಾಡಿದ್ದು, ಇದಕ್ಕೆ ಸಂಬಂಧಿಸಿದಂತೆ, ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ, ಬೆಂಗಳೂರು ಇವರು ಸದರಿ ಕಟ್ಟಡಕ್ಕೆ ರೂ. 17,700/– ಬಾಡಿಗೆ ನಿಗಧಿಪಡಿಸಿ, ಬಾಡಿಗೆ ದೃಢೀಕರಣ ಪತ್ರ ನೀಡಿರುತ್ತಾರೆ.

ಸದರಿ ಕಛೇರಿಯು ದಿನಾಂಕ : 01.03.2008 ರಿಂದ ಕಾರ್ಯಾರಂಭಗೊಂಡಿದ್ದು, ಸದರಿ ಕಟ್ಟಡಕ್ಕೆ ಮಾಹೆಯಾನ ರೂ. 17,700/–ಗಳ ಬಾಡಿಗೆಯನ್ನು ದಿನಾಂಕ : 01.03.2008 ರಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಬೇಕೆಂದು ಹಾಗೂ

ಸದರಿ ಹೆಚ್ಚುವರಿ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2030–03–001–071 ರ ಅಡಿಯಲ್ಲಿ ಈಗಾಗಲೇ ಇತರೇ ಕಟ್ಟಡಗಳಿಗೆ ಭರಿಸುವ ರೀತ್ಯಾ ವೆಚ್ಚ ಭರಿಸಬೇಕಾಗಿದ್ದು, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 341 ಮುನೋಮು 2008 ಬೆಂಗಳೂರು, ದಿನಾಂಕ : 28–05–2009**

ಗಂಗಾನಗರ ಉಪ ನೋಂದಣಿ ಕಛೇರಿಯ ಕಾರ್ಯವನ್ನು ನಡೆಸಲು ಶ್ರೀಮತಿ ಕೆ. ರುಕ್ಮಿಣಮ್ಮ ಕೋಂ ಆರ್. ಕೃಷ್ಣಪ್ಪ ಇವರ ಮಾಲೀಕತ್ವದ ನಂ. 70, 5ನೇ ಮುಖ್ಯ ರಸ್ತೆ, ಗಂಗಾನಗರ ಬೆಂಗಳೂರು–32, ಇಲ್ಲಿರುವ ಖಾಸಗಿ ಕಟ್ಟಡದಲ್ಲಿನ 1ನೇ ಮಹಡಿಯಲ್ಲಿನ 1900 ಚದರ ಅಡಿಗಳಿಗೆ ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸಿರುವಂತೆ ಮಾಸಿಕ ಬಾಡಿಗೆ ರೂ. 17,700/– (ಹದಿನೇಳು ಸಾವಿರದ ಏಳುನೂರು ರೂಪಾಯಿಗಳು ಮಾತ್ರ) ಗಳನ್ನು ದಿನಾಂಕ : 01.03.2008 ಜಾರಿಗೆ ಬರುವಂತೆ ನೀಡಲು ಸರ್ಕಾರವು ಅನುಮತಿ ನೀಡಿದೆ.

ಈ ವೆಚ್ಚವನ್ನು 'ಲೆಕ್ಕ ಶೀರ್ಷಿಕೆ 2030–03–001–071' ರಲ್ಲಿ ಭರಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಕಂಇ 20025 ಐಎಫ್ಎ 09, ದಿನಾಂಕ : 02.05.2009 ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ : 10.07.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೩ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಪಶ್ಚಿಮಘಟ್ಟದಲ್ಲಿರುವ ಮಹತ್ವದ ಸಸ್ಯ ಸಂಪತ್ತು ಮತ್ತು ವನ್ಯ ಸಂಪತ್ತನ್ನು ಸಂರಕ್ಷಿಸಲು ವಿಶೇಷ ಕಾರ್ಯಪಡೆಗೆ ನಾಮ ನಿರ್ದೇಶನ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ, ಸೇರ್ಪಡೆ ಮತ್ತು ತಿದ್ದುಪಡಿ ಸಂಖ್ಯೆ : ಅಪಜೀ 125 ಎಫ್‌ಎಪಿ 2008, ದಿನಾಂಕ:04–09–2008, 08–09–2008 ಮತ್ತು 04–10–2008.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪತ್ರ ಸಂಖ್ಯೆ : ಪ್ರಮುಅಸಂ/ಸಿಆರ್–40 /2008–09, ದಿನಾಂಕ : 27–01–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 04–09–2008ರ ಆದೇಶದಲ್ಲಿ ಪಶ್ಚಿಮಘಟ್ಟದಲ್ಲಿರುವ ಮಹತ್ವದ ಸಸ್ಯ ಸಂಪತ್ತು ಮತ್ತು ವನ್ಯ ಸಂಪತ್ತನ್ನು ಸಂರಕ್ಷಿಸಲು ಮತ್ತು ಅರಣ್ಯ ಚಟುವಟಿಕೆಗಳನ್ನು ತೀವ್ರಗೊಳಿಸಲು ಪಶ್ಚಿಮಘಟ್ಟಗಳ ಸಂರಕ್ಷಣೆ ಕಾರ್ಯಪಡೆ (ಸಹ್ಯಾದ್ರಿ)ಯನ್ನು ಶ್ರೀ ಅನಂತ ಹೆಗಡೆ ಅಶೀಸರ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 27–01–2009ರ ಪತ್ರದಲ್ಲಿ ಶ್ರೀ ದಿನೇಶ್ ನಾಯಕ್, ಅಧ್ಯಕ್ಷರು, ಸಸ್ಯಶಾಮಲ, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಪಶ್ಚಿಮಘಟ್ಟ ಅಭಿವೃದ್ಧಿ ಪ್ರಾಧಿಕಾರಕ್ಕೆ ನಾಮ ನಿರ್ದೇಶನ ಮಾಡಲು ಸೂಕ್ತ ಆದೇಶ ನೀಡುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶ್ರೀ ದಿನೇಶ್ ನಾಯಕ್, ಅಧ್ಯಕ್ಷರು, ಸಸ್ಯಶಾಮಲ, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಪಶ್ಚಿಮಘಟ್ಟಗಳ ಸಂರಕ್ಷಣೆ ಕಾರ್ಯಪಡೆ (ಸಹ್ಯಾದ್ರಿ)ಯ ಸದಸ್ಯರನ್ನಾಗಿ ನೇಮಕ ಮಾಡಲು ಸರ್ಕಾರ ನಿರ್ಣಯಿಸಿರುವ ಕಾರಣ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 125 ಎಫ್‌ಎಪಿ 2008 ಬೆಂಗಳೂರು, ದಿನಾಂಕ : 5ನೇ ಜೂನ್ 2009**

ಸರ್ಕಾರವು ಶ್ರೀ ದಿನೇಶ್ ನಾಯಕ್, ಅಧ್ಯಕ್ಷರು, ಸಸ್ಯಶಾಮಲ, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಪಶ್ಚಿಮಘಟ್ಟಗಳ ಸಂರಕ್ಷಣೆ ಕಾರ್ಯಪಡೆ (ಸಹ್ಯಾದ್ರಿ)ಯ ಸದಸ್ಯರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೪ |
|---|---|---|



## ಕರ್ನಾಟಕ ಸರ್ಕಾರದ ನಡವಳಿಗಳು

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎ.ಎಸ್. ನೀಲಕಂಠಭಟ್ಟ, ಮಾಜಿ ಸೈನಿಕರು, ಮುತದ್ದಕೇರಿ, ಶಿರಾಳಕೊಪ್ಪ ಇವರಿಗೆ ಸೊರಬ ತಾಲ್ಲೂಕು, ಕೋಲ್ಲುಗಣಿಸಿ ಗ್ರಾಮದ ಸ.ನಂ. 110 ರಲ್ಲಿ 10.00 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 17 ಎಲ್‌ಜಿಎಸ್ 2006, ದಿ : 31.10.2007

2) ಶ್ರೀ ಎ.ಎಸ್. ನೀಲಕಂಠಭಟ್ಟ, ಮಾಜಿ ಸೈನಿಕರು ಇವರ ಮನವಿ ದಿ:12.08.2008

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 17 ಎಲ್‌ಜಿಎಸ್ 2006, ದಿ:31.10.2007 ರಲ್ಲಿ ಶ್ರೀ ಎ.ಎಸ್. ನೀಲಕಂಠ ಭಟ್ಟ ಇವರಿಗೆ ಕೋಲ್ಲುಗಣಿಸಿ ಗ್ರಾಮದ ಸ.ನಂ. 110ರಲ್ಲಿ 10 ಎಕರೆ ಜಮೀನನ್ನು ಬೆಲೆ ಅಂದರೆ ಎಕರೆಯೊಂದಕ್ಕೆ ರೂ. 19,000/– ದಂತೆ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ಅರ್ಜಿದಾರರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿ ಜಮೀನನ್ನು ಉಚಿತವಾಗಿ / ರಿಯಾಯಿತಿ ದರದಲ್ಲಿ ನೀಡಿ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅರ್ಜಿದಾರರ ಕೋರಿಕೆಯಂತೆ ಸದರಿ ಜಮೀನನ್ನು ಪ್ರತಿ ಎಕರೆಗೆ ರೂ. 19,000/– ಕ್ಕೆ ಬದಲಾಗಿ ರೂ. 10,000/– ಕ್ಕೆ ನಿಗಧಿ ಪಡಿಸಲು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 27 ಎಲ್‌ಜಿಎಸ್ 2008, ಬೆಂಗಳೂರು, ದಿನಾಂಕ : 18–06–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 17 ಎಲ್‌ಜಿಎಸ್ 2006, ದಿ : 31.10.2007ನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27 ರನ್ವಯ ಶ್ರೀ ಎ.ಎಸ್. ನೀಲಕಂಠ ಭಟ್ಟ, ಮಾಜಿ ಸೈನಿಕರು ಇವರಿಗೆ ಕೋಲ್ಲುಗಣಿಸಿ ಗ್ರಾಮದ ಸ. ನಂ. 110ರಲ್ಲಿ 10 ಎಕರೆ ಜಮೀನನ್ನು ಪ್ರತಿ ಎಕರೆಗೆ ರೂ. 19,000/– ಕ್ಕೆ ಬದಲಾಗಿ ಪ್ರತಿ ಎಕರೆಗೆ ರೂ. 10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಇನ್ನು ಮುಂದೆ ಯಾವುದೇ ಕಾರಣಕ್ಕೂ ಸದರಿ ಪ್ರಕರಣವನ್ನು ಪೂರ್ವನಿದರ್ಶನವೆಂದು ಪರಿಗಣಿಸತಕ್ಕದಲ್ಲ ಎಂಬ ಷರತ್ತು ವಿಧಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ. ಮಂಜೂರಾತಿ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೫ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

## ಕಂದಾಯ ಸಚಿವಾಲಯ

**ವಿಷಯ :** ತತ್ಕಾಲ್ ಪೋಡಿ ಮತ್ತು ಪ್ರಿ ಮ್ಯುಟೇಷನ್ ಸ್ಕೆಚ್ ಯೋಜನೆಯಡಿಯಲ್ಲಿ ಸ್ವೀಕರಿಸುವ ಶುಲ್ಕವನ್ನು ನಿರ್ವಹಿಸಲು ತಹಶೀಲ್ದಾರ್ ರವರುಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಖಾತೆ ತೆರೆಯಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಕಂಇ 142 ಭೂದಾಸ 2008, ದಿ: 12.8.2008.
2. ಆಯುಕ್ತರು, ಭೂ.ಕಂ.ವ್ಯ. ಮತ್ತು ಭೂದಾಖಲೆಗಳ ಇಲಾಖೆ ರವರ ಪತ್ರ ಸಂಖ್ಯೆ: ತಾಂ.ಪ.ಭೂ.ಘಟಕ.52/ 2008–09, ದಿ:6.10.2008
3. ಆಯುಕ್ತರು,ಭೂ.ಕಂ.ವ್ಯ.ಮತ್ತು ಭೂದಾಖಲೆಗಳ ಇಲಾಖೆ ರವರ ಪತ್ರಸಂಖ್ಯೆ:TNL/LS/ CELL.52/08–09,ದಿ:19.2.2009.
4. ಆಯುಕ್ತರು,ಭೂ.ಕಂ.ವ್ಯ. ಮತ್ತು ಭೂದಾಖಲೆಗಳ ಇಲಾಖೆ ರವರ ಪತ್ರ ನಂ.ತಾಂ.ಪ.ಭೂ. ಘಟಕ52/2008–09,ದಿ:5.3.2009.

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:17–07–2008ರಂದು ಕರ್ನಾಟಕ ವಿಧಾನ ಮಂಡಲದಲ್ಲಿ ಮಂಡಿಸಿದ 2008–2009ನೇ ಸಾಲಿನ ಆಯವ್ಯಯ ಭಾಷಣದಲ್ಲಿ 'ಭೂಮಿ' ಯೋಜನೆಯಡಿ ಭೂದಾಖಲೆಗಳನ್ನು ಗಣಕೀಕರಿಸಿರುವ ಕಾರ್ಯಕ್ಕಾಗಿ ರಾಜ್ಯದ ಕಂದಾಯ ಇಲಾಖೆಯು ಸಾಕಷ್ಟು ಪ್ರಶಂಸೆ ಗಳಿಸಿದೆ. ಕಂದಾಯ ಇಲಾಖೆಯು ಇದೇ ಹಾದಿಯಲ್ಲಿ ಮುಂದುವರಿದು ರೈತಸ್ನೇಹಿಯಾದ **"ತತ್ಕಾಲ್ ಪೋಡಿ"** ಎನ್ನುವ ಇನ್ನೊಂದು ಯೋಜನೆಯನ್ನು ಜಾರಿಗೊಳಿಸಲು ಉದ್ದೇಶಿಸಿದೆ. ಈ ಯೋಜನೆಯಡಿ ರೈತರಿಂದ ನಿಗದಿತ ಶುಲ್ಕದೊಡನೆ ಸ್ವೀಕೃತವಾಗುವ ಪೋಡಿ ಅರ್ಜಿಗಳನ್ನು ಒಂದು ತಿಂಗಳಿನ ಒಳಗೆ ಮೋಜಣಿ ಮಾಡಿ ಪೋಡಿ ದಾಖಲೆಗಳನ್ನು ಒದಗಿಸಲಾಗುವುದು ಎಂದು ಘೋಷಿಸಿದ್ದು, ಅದರಂತೆ ಮೇಲೆ (1) ರಲ್ಲಿ ಓದಲಾದ ದಿನಾಂಕ:12.8.2008ರ ಸರ್ಕಾರಿ ಆದೇಶದಲ್ಲಿ ತತ್ಕಾಲ್ ಪೋಡಿ ಯೋಜನೆಯನ್ನು ಈ ಕೆಳಕಂಡ ಷರತ್ತುಗಳೊಡನೆ ಮಂಜೂರಾತಿ ನೀಡಲಾಗಿರುತ್ತದೆ.

1. 'ತತ್ಕಾಲ್' ಪೋಡಿ ಪ್ರಕರಣಗಳ ಬಾಬ್ತು ರೂ.500/– ಹಾಗೂ Pre Mutation Sketch ಶುಲ್ಕವನ್ನು ಹಾಲಿ ಇರುವ ರೂ.403/– ಬದಲಾಗಿ ರೂ.600/–ಗಳ ಶುಲ್ಕವನ್ನು ನಿಗದಿಪಡಿಸಿ ಆದೇಶಿಸಿದೆ.
2. ಪೋಡಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸಂಗ್ರಹವಾಗುವ ಶುಲ್ಕದ ಹಣವನ್ನು ನಿರ್ವಹಿಸಲು ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ "ಭೂಮಿ" ಯೋಜನೆಯಡಿಯಲ್ಲಿ ಇರುವ ಪಿ.ಡಿ. ಖಾತೆಯಲ್ಲಿಟ್ಟು ಉಪಯೋಗಿಸತಕ್ಕದ್ದು. ಆದಾಗ್ಯೂ ಭೂಮಿ ಮತ್ತು ಪೋಡಿ ಕೆಲಸಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಲೆಕ್ಕ ಪುಸ್ತಕಗಳನ್ನು ನಿರ್ವಹಿಸಬೇಕು.
3. ರಾಜ್ಯ ಮಟ್ಟದಲ್ಲಿ 'ಪೋಡಿ ಯೋಜನೆಗೆ' ಆಯುಕ್ತರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಹೆಸರಿನಲ್ಲಿ ಪ್ರತ್ಯೇಕ ಪಿ.ಡಿ. ಖಾತೆಯನ್ನು ತೆರೆಯಲು ಸರ್ಕಾರ ಅನುಮೋದಿಸಿದೆ.
4. ಏಕ ಕಾಲದಲ್ಲಿ (at any point of time) ಒಂದು ಕೋಟಿ ರೂಪಾಯಿಗಳನ್ನು ಮೀರಬಾರದೆಂಬ ಷರತ್ತಿನೊಡನೆ ಬ್ಯಾಂಕಿನ ಖಾತೆ ತೆರೆಯಲು ಆಯುಕ್ತರು, ಭೂಮಾಪನ, ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಿದೆ.
5. ಪೋಡಿ ಪ್ರಕರಣದ ಸ್ಥಿರ ನಿಧಿಗೆ ಸಂಬಂಧಿಸಿದಂತೆ ಪ್ರತಿ ವರ್ಷ ಆಡಿಟ್ ಮಾಡಿಸುವುದು ಮತ್ತು Auditted Accounts ನ ಲೆಕ್ಕ ಪತ್ರಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರ ಅಧ್ಯಕ್ಷತೆಯಲ್ಲಿ ರಚಿಸಲಾಗುವ ಸಮಿತಿ ಮುಂದೆ ಆರ್ಥಿಕ ವರ್ಷ ಮುಕ್ತಾಯವಾದ 3 ತಿಂಗಳೊಳಗಾಗಿ ಮಂಡಿಸಿ ಅನುಮೋದನೆ ಪಡೆಯತಕ್ಕದ್ದು.

6. ಹಳೆಯ ಪೋಡಿ ಪ್ರಕರಣಗಳ ಕಾರ್ಯಕ್ಕಾಗಿ ಯಾವುದೇ ವಿಶೇಷ ಹಣ ಮಂಜೂರು ಮಾಡಲಾಗುವುದಿಲ್ಲ. ಈ ಬಗ್ಗೆ ಇಲಾಖೆಯಲ್ಲಿ ಲಭ್ಯವಿರುವ ಭೂಮಾಪಕರನ್ನು ಉಪಯೋಗಿಸಿಕೊಳ್ಳತಕ್ಕದ್ದು.

7. ಹೊಸ ಪೋಡಿ ಪ್ರಕರಣಗಳಿಂದ ವಸೂಲಿ ಆಗುವ ಹಣದಿಂದ ಉಳಿತಾಯವಾಗುವ ಸರ್ಕಾರದ (Share) ಭಾಗಾಂಶ ಹಣವನ್ನು ಹಳೆಯ ಪೋಡಿ ಕೆಲಸಕ್ಕೆ ಉಪಯೋಗಿಸಿಕೊಳ್ಳಲು ಸರ್ಕಾರವು ಒಪ್ಪಿರುತ್ತದೆ.

ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರು ಮೇಲೆ(2)ರಲ್ಲಿ ಓದಲಾದ ದಿನಾಂಕ:06–10–2008ರ ಪ್ರಸ್ತಾವನೆಯನ್ನು ಸಲ್ಲಿಸಿ ರಾಜ್ಯದಲ್ಲಿ ತತ್ಕಾಲ್ ಪೋಡಿ ಯೋಜನೆಯನ್ನು ಸರ್ಕಾರದ ಆದೇಶದಂತೆ ಜಾರಿಗೆ ಬಂದಿದ್ದು, ಈ ಕಾರ್ಯವನ್ನು ನಿರ್ವಹಿಸಲು ಸಾರ್ವಜನಿಕರು ರೂ.500.00 ಶುಲ್ಕವನ್ನು ಪಾವತಿಸಬೇಕಾಗಿರುತ್ತದೆ. ಈ ಹಣವನ್ನು ನಿರ್ವಹಿಸಲು ತಹಶೀಲ್ದಾರ್‌ರವರಲ್ಲಿ ಪಿ.ಡಿ. ಖಾತೆ ಇರುವುದಿಲ್ಲ. ಪಿ.ಡಿ. ಖಾತೆ ಇದ್ದಲ್ಲೂ ಸಹ ಹೀಗೆ ನಿರಂತರವಾಗಿ ಸಂಗಹವಾಗುವ ಹಣವನ್ನು ನಿರ್ವಹಣೆ ಮೂಲಕ ಪದೇ ಪದೇ ಪರವಾನಗಿ ಭೂಮಾಪಕರಿಗೆ ಪಾವತಿಸಬೇಕಾಗಿರುತ್ತದೆ. ಆದ್ದರಿಂದ ಈ ಹಣವನ್ನು ಪಿ.ಡಿ. ಖಾತೆಯಲ್ಲಿ ಜಮಾ ಮಾಡುವುದು ಅಷ್ಟೊಂದು ಸಮಂಜಸವಾಗಲಾರದು. ಆದ್ದರಿಂದ ಹೀಗೆ ತತ್ಕಾಲ್ ಯೋಜನೆಯಡಿಯಲ್ಲಿ ಸಂಗ್ರಹವಾಗುವ ಹಣವನ್ನು ತಹಶೀಲ್ದಾರ್‌ರವರು ತಮ್ಮ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಖಾತೆಯನ್ನು ತೆರೆದು, ಅದರಲ್ಲಿ ಜಮಾ ಮಾಡುವುದು ಹಾಗೂ ಮಾಡಿದ ಹಣದ ಪೈಕಿ ಪರವಾನಗಿಭೂಮಾಪಕರಿಗೆ ನೀಡಬೇಕಾದ ರೂ.300.00 ಹಣವನ್ನು ಪಾವತಿಸಿ ಉಳಿದ ಹಣವನ್ನು ಪ್ರತಿ ಪ್ರಕರಣಕ್ಕೆ ರೂ.200.00 ರಂತೆ ಸಂಗ್ರಹವಾಗುವ User charges ಹಣವನ್ನು ರಾಜ್ಯಮಟ್ಟದಲ್ಲಿ ನಿರ್ವಹಿಸಲು 03 ತಿಂಗಳಿಗೊಮ್ಮೆ ವರ್ಗಾಯಿಸಬಹುದಾಗಿದೆ. ಹಾಲಿ ಪರವಾನಗಿ ಭೂಮಾಪಕರ ಯೋಜನೆಯಡಿಯಲ್ಲಿ ಸಾರ್ವಜನಿಕರು ಪಾವತಿಸಿದ ಹಣವನ್ನು ಸುರಕ್ಷಿತವಾಗಿ ಸಂರಕ್ಷಿಸಿಡುವ ಜವಾಬ್ದಾರಿಯನ್ನು ಆಯಾ ತಾಲ್ಲೂಕಿನ ಪರ್ಯಾವೇಕ್ಷಕರಿಗೆ ನೀಡಲಾಗಿದೆ. ಇದರಿಂದ ಸದರಿ ಮೊತ್ತವು ದುರುಪಯೋಗವಾಗುವ ಸಂಭವವಿರುವುದರಿಂದ ಪ್ರತಿ ತಾಲ್ಲೂಕಿನ ತಹಶೀಲ್ದಾರ್‌ರವರ ಪದನಾಮದಲ್ಲಿ ತೆರೆಯಲಾಗುವ ರಾಷ್ಟ್ರೀಕೃತ ಬ್ಯಾಂಕಿನಲ್ಲಿನ ಖಾತೆಯಲ್ಲಿ ಜಮಾ ಮಾಡಿ ನಿರ್ವಹಿಸುವುದು ಅಗತ್ಯವಾಗಿದೆ.

ಕಾರಣ ಪ್ರತಿ ತಾಲ್ಲೂಕಿನ ತಹಶೀಲ್ದಾರ್‌ರವರ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಖಾತೆ ತೆರೆದು ಸದರಿ ಮೊತ್ತವನ್ನು ಅದರಲ್ಲಿರಿಸಿ, ಕ್ರಮಬದ್ಧವಾಗಿ ನಿರ್ವಹಿಸಲು ಸೂಚಿಸುವ ಬಗ್ಗೆ ಅನುಮೋದನೆ ನೀಡಬೇಕಾಗಿ ಕೋರಿದ್ದಾರೆ.

ಪ್ರಸ್ತಾವನೆಗೆ ಸಂಬಂಧಿಸಿದಂತೆ ಸಹಮತಿಗಾಗಿ ಆರ್ಥಿಕ ಇಲಾಖೆಗೆ ಕಡತವನ್ನು ಕಳುಹಿಸಲಾಗಿ ಆರ್ಥಿಕ ಇಲಾಖೆಯು ಅ.ಟಿ.ಸಂಖ್ಯೆ:ಎಫ್‌ಡಿ 1384 ವೆಚ್ಚ 7/08, ದಿನಾಂಕ:9.1.2009 ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

While agreeing to management of phodi fee funds through accounts in the nationalized banks, Finance Department suggests the following stipulations.

1. Cabinet approval should be obtained.

2. A financial management plan is developed for these 2 schemes, the plan should cover
   a. Role and responsibilities of Commissioner, DDLR/ADLR, Deputy Commissioners and Tahsildars;
   b. Procedure and norms for fee collection, deposit, inter account transfer and utilization of funds;
   c. Formats for maintenance of accounts by Tahsildars and Commissioner;
   d. Audit and over sight measures. The plan should be submitted to Finance Department within next 2 months of approval.

3. A report on operations of the schemes along with the audit findings should be included in the annual report of the Revenue Department to be presented to the Legislature.

4. A committee headed by Principal Secretary, Revenue Department and representatives of Finance and DPAR(AR) should review the accounts on quarterly basis. The annual audit report should be placed **before** the committee within 3 months after close of a financial year.

5. The balance available at the end of each financial year should be reported to Finance Department, which will advise regarding depositing any exces balance overand above 3 months net requirement to the Consolidated Fund.

6. The financial arrangement should be reviewed in April 2010 in consultation with Finance Department

7. The Government may request the Accountant General for special audit of the scheme.

ಆರ್ಥಿಕ ಇಲಾಖೆಯ ಅಭಿಪ್ರಾಯದನ್ವಯ ಆಯುಕ್ತರು, ಭೂಮಾಪನ ಇಲಾಖೆ ರವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 19.2.2009 ರ ಪತ್ರದಲ್ಲಿ ಈ ಕೆಳಗಿನಂತೆ ತಿಳಿಸಿರುತ್ತಾರೆ.

1. ಆರ್ಥಿಕ ಇಲಾಖೆಗೆ 2 ತಿಂಗಳೊಳಗಾಗಿ 2 ಯೋಜನೆಗಳ Financial Plan ಮಂಡಿಸಲಾಗುವುದು.
2. A report on operation of the scheme along with audit findings will be included in the annual report will be provided to the Revenue Department tobe presented to the legislature.
3. ಸರ್ಕಾರಿ ಆದೇಶ ಸಂಖ್ಯೆ:ಕಂಇ 142 ಭೂದಾಸ 2008, ದಿನಾಂಕ: 26.11.2008 ರಲ್ಲಿ ರಚಿಸಿರುವ ಸಮಿತಿಗೆ ಆರ್ಥಿಕ ಇಲಾಖೆ ಸಿ.ಆ.ಸು.ಇ (AR) ರ ಪ್ರತಿನಿಧಿಗಳನ್ನು ತಿದ್ದುಪಡಿ ಆದೇಶದ ಮೂಲಕ ಸೇರಿಸಿಕೊಳ್ಳಬಹುದೆಂದು,
4. ಆರ್ಥಿಕ ವರ್ಷದ ಮುಕ್ತಾಯದ ನಂತರ 3 ತಿಂಗಳೊಳಗಾಗಿ ವಾರ್ಷಿಕ ಆಡಿಟ್ ವರದಿಯನ್ನು ಸಮಿತಿ ಮುಂದೆ ಮಂಡಿಸಲಾಗುವುದು.
5. ಪತಿ ಆರ್ಥಿಕ ವರ್ಷದ ಮುಕ್ತಾಯದ ನಂತರ ಉಳಿಯಬಹುದಾದ ಶುಲ್ಕವನ್ನು ಆರ್ಥಿಕ ಇಲಾಖೆ ಮುಂದಿನ ಕ್ರಮಕ್ಕೆ ವರದಿ ಮಾಡಲಾಗುವುದು.
6. ಏಪ್ರಿಲ್ 2010 ರಲ್ಲಿ ಆರ್ಥಿಕ ನಿರ್ವಹಣೆಯನ್ನು ಪುನರ್ ಪರಿಶೀಲಿಸಲು,
7. ಮಹಾಲೇಖಪಾಲರಿಂದ ವಿಶೇಷ ಆಡಿಟ್ ಮಂಡಿಸಲು ಮಹಾಲೇಖಪಾಲರನ್ನು ಕೋರಲಾಗುವುದು.

ಮೇಲೆ (4) ರಲ್ಲಿ ಓದಲಾದ ಆಯುಕ್ತರು, ಭೂಮಾಪನ ಇಲಾಖೆ ರವರು ದಿನಾಂಕ: 5.3.2009 ರ ಪತ್ರದಲ್ಲಿ ಎರಡು ಯೋಜನೆಗಳಾದ ತತ್ಕಾಲ್ ಪೋಡಿ ಮತ್ತು ಪ್ರಿ ಮ್ಯುಟೇಷನ್ ಸ್ಕೆಚ್ ಯೋಜನೆಯಡಿಯಲ್ಲಿ ಸ್ವೀಕರಿಸುವ ಶುಲ್ಕವನ್ನು ನಿರ್ವಹಿಸಲು ತಹಶೀಲ್ದಾರ್‌ರವರುಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಖಾತೆ ತೆರೆಯಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತತ್ಕಾಲ್ ಪೋಡಿ ಮತ್ತು ಪ್ರಿ ಮ್ಯುಟೇಷನ್ ಸ್ಕೆಚ್ ಯೋಜನೆಯಡಿಯಲ್ಲಿ ಸ್ವೀಕರಿಸುವ ಶುಲ್ಕವನ್ನು ನಿರ್ವಹಿಸಲು ತಹಶೀಲ್ದಾರ್‌ರವರುಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಖಾತೆ ತೆರೆಯಲು ಅನುಮತಿ ನೀಡುವ ಬಗ್ಗೆ ಪ್ರಸ್ತಾವನೆಯ ಅಗತ್ಯತೆಯನ್ನು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 236 ಭೂದಾಸ 2008, ಬೆಂಗಳೂರು, ದಿನಾಂಕ : 10.06.2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ತತ್ಕಾಲ್ ಪೋಡಿ ಮತ್ತು ಪ್ರಿ ಮ್ಯುಟೇಷನ್ ಸ್ಕೆಚ್ ಯೋಜನೆಯಡಿಯಲ್ಲಿ ಸ್ವೀಕರಿಸುವ ಶುಲ್ಕವನ್ನು ನಿರ್ವಹಿಸಲು ತಹಶೀಲ್ದಾರ್‌ರವರುಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಖಾತೆ ತೆರೆಯಲು ಈ ಕೆಳಕಂಡ ಷರತ್ತುಗಳೊಡನೆ ಅನುಮತಿ ನೀಡಿ ಆದೇಶಿಸಿದೆ.

1. A financial management plan is developed for these 2 schemes, the plan should cover
    a. Role and responsibilities of Commissioner, DDLR/ADLR, Deputy Commissioners and Tahsildars;
    b. Procedure and norms for fee collection, deposit, inter account transfer and utilization of funds;
    c. Formats for maintenance of accounts by Tahsildars and Commissioner;
    d. Audit and over sight measures. The plan should be submitted to Finance Department within next 2 months for approval.
2. A report on operations of the schemes along with the audit findings should be included in the annual report of the Revenue Department to be presented to the Legislature.

3. A committee headed by Principal Secretary, Revenue Department and representatives of Finance and DPAR(AR) should review the accounts on quarterly basis. The annual audit report should be placed **before** the committee within 3 months after close of a financial year.

4. The balance available at the end of each financial year should be reported to Finance Department,which will advise regarding depositing any exces balance overand above 3 months net requirement to the Consolidated Fund.

5. The financial arrangement should be reviewed in April 2010 in consultation with Finance Department

6. The Government may request The Accountant General for special audit of the scheme.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ:ಎಫ್‌ಡಿ 1384 ವೆಚ್ಚ–7/08, ದಿನಾಂಕ:09.01.2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ಚೌಕೀಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ, ೧ ಶಕ ವರ್ಷ ೧೯೩೧) | ನಂ. ೫೭೬ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು
## ಕಂದಾಯ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ಹೋಬಳಿ, ಕದ್ರಿಮಿದ್ರಿ ಗ್ರಾಮದ ಸ.ನಂ.273ರಲ್ಲಿ 78.00 ಎಕರೆ ಜಮೀನನ್ನು ಫುಡ್ ಪಾರ್ಕ್ ನಿರ್ಮಾಣಕ್ಕಾಗಿ ಮೆ:ಯಗಚಿ ಫುಡ್ ಟೆಕ್ನಾಲಜಿ ಪಾರ್ಕ್ ಪ್ರೈ. ಲಿ. ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ರವರ ಪತ್ರ ಸಂ:ಎಂ4/ಎಲ್‌ಎನ್‌ಡಿ/ಸಿಆರ್/88/08–09 ದಿ:08.01.2009.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಇವರು ದಿನಾಂಕ:08.01.2009ರ ಪತ್ರದಲ್ಲಿ ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ಹೋಬಳಿ, ಕದ್ರಿಮಿದ್ರಿ ಗ್ರಾಮದ ಸ.ನಂ.273ರಲ್ಲಿ ಮೆ: ಯಗಚಿ ಫುಡ್ ಟೆಕ್ನಾಲಜಿ ಪಾರ್ಕ್ ಪ್ರೈ. ಲಿ. ಬೆಂಗಳೂರು ಇವರಿಗೆ ಫುಡ್ ಪಾರ್ಕ್ ಸ್ಥಾಪಿಸುವ ಉದ್ದೇಶಕ್ಕಾಗಿ 90–00 ಎಕರೆ ಜಮೀನನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಒದಗಿಸಿರುವ ಮಾಹಿತಿಯನ್ವಯ ಮೆ:ಯಗಚಿ ಫುಡ್ ಟೆಕ್ನಾಲಜಿ ಪಾರ್ಕ್ ಪ್ರೈ. ಲಿ., ಬೆಂಗಳೂರು ಸಂಸ್ಥೆ ಕಂಪನಿ ಕಾಯ್ದೆ 1956ರ ಮೇರೆಗೆ ಕೇಂದ್ರ ಸರ್ಕಾರದಿಂದ 9.9.2005ರಂದು ನೋಂದಾಯಿತವಾಗಿದ್ದು, ಮೆಗಾ ಫುಡ್ ಪಾರ್ಕ್ ಯೋಜನೆ ಅಡಿಯಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮೆಗಾ ಫುಡ್ ಪಾರ್ಕ್ ಸ್ಥಾಪಿಸಲು ಕೇಂದ್ರ ಸರ್ಕಾರದಿಂದ ಆಹಾರ ಸಂಸ್ಕರಣೆ ಕೈಗಾರಿಕೆಗಳ ಮಂತ್ರಾಲಯದಿಂದ ಹಾಗೂ ಉದ್ಯೋಗ ಮಿತ್ರ ಏಕಗವಾಕ್ಷಿ ಅನುಮತಿ ಸಮಿತಿ ನಿರ್ಣಯದಂತೆ ಅನುಮತಿ ಪಡೆದಿರುವ ಸಂಸ್ಥೆಯಾಗಿರುತ್ತದೆ.

ಹಾಗೂ ಸದರಿ ಸಂಸ್ಥೆಯು 2005ನೇ ಸಾಲಿನಲ್ಲಿ ಸ್ಥಾಪನೆ ಆಗಿರುವುದರಿಂದ, ಈವರೆಗೂ ಆಡಿಟ್ ನಡೆಸಲಾಗಿರುವುದಿಲ್ಲ ಮತ್ತು ಫುಡ್ ಪಾರ್ಕ್ ನಿರ್ಮಾಣ ಉದ್ದೇಶಕ್ಕಾಗಿಯೇ ಸ್ಥಾಪಿಸಲ್ಪಟ್ಟ ನೂತನ ಸಂಸ್ಥೆ ಆಗಿರುವುದರಿಂದ, Financial Net Worth Statement ಅನ್ನು ಜಿಲ್ಲಾಧಿಕಾರಿಗಳು ಒದಗಿಸಿರುತ್ತಾರೆ.

ಸದರಿ ಜಮೀನನ್ನು ಫುಡ್ ಪಾರ್ಕ್ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಕುರಿತು ಅರಣ್ಯ ಉಪಸಂರಕ್ಷಣಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಇವರು ವರದಿ ಸಲ್ಲಿಸಿ ಪ್ರಸ್ತಾಪಿತ ಜಮೀನು 1984–85ನೇ ಸಾಲಿನಲ್ಲಿ ಅರಣ್ಯ ಕಾಯ್ದೆ 1963ರ ಕಲಂ 4ರ ಮೇರೆಗೆ ಮೀಸಲು ಅರಣ್ಯ ರಚಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ ಪ್ರದೇಶ ಆಗಿರುವುದಾಗಿಯೂ, ಆರ್.ಟಿ.ಸಿ. ಪ್ರಕಾರ

ಗುಂಡುತೋಪು ಎಂದು ನಮೂದಾಗಿದ್ದು, ಇಲಾಖೆ ವತಿಯಿಂದ ನೆಡುತೋಪು ಬೆಳಸಿರುವ ಪ್ರದೇಶವಾಗಿರುವುದರಿಂದ ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಅರಣ್ಯ ಎಂದು ಪರಿಗಣಿಸತಕ್ಕದಾಗಿರುವುದರಿಂದ ಈ ಆದೇಶಕ್ಕೆ ಪೂರಕವಾಗಿ ನಿಯಮಾನುಸಾರ ಮುಂದಿನ ಕ್ರಮಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಆದರೆ, ಜಿಲ್ಲಾಧಿಕಾರಿಗಳು ಮೇಲಿನ ಅಂಶಗಳಿಗೆ ತಮ್ಮ ಪ್ರತಿಕ್ರಿಯೆ ನೀಡುತ್ತಾ, ಸದರಿ ವರದಿಯನ್ನು ಪರಿಶೀಲಿಸಲಾಗಿ ಕದ್ರಿಮಿದ್ರಿ ಗ್ರಾಮದ ಸ.ನಂ.273 ಜಮೀನು ಮೂಲತ: ಗೋಮಾಳ ವರ್ಗಕ್ಕೆ ಸೇರಿರುತ್ತದೆ. ಆರ್.ಟಿ.ಸಿ.ಯಲ್ಲಿ ನೆಡುತೋಪು ಎಂದು ದಾಖಲಿಸುವ ಬದಲು ಗುಂಡುತೋಪು ಎಂದು ತಪ್ಪಾಗಿ ದಾಖಲಾಗಿರುವುದು ಕಂಡು ಬರುತ್ತದೆ. ಜಮೀನನ್ನು ಸಿ ಮತ್ತು ಡಿ ವರ್ಗದ ಜಮೀನೆಂದು ಪರಿಗಣಿಸಿ ಅರಣ್ಯ ಇಲಾಖೆಗೆ ವರ್ಗಾವಣೆ ಮಾಡಲಾಗಿದ್ದುದನ್ನು ಸರ್ಕಾರದ ಆದೇಶ ಸಂ.ಆರ್‌ಡಿ 106 ಎಲ್‌ಜಿಪಿ 88 ದಿನಾಂಕ : 03.01.1991ರ ಮೇರೆಗೆ ಜಿಲ್ಲಾಧಿಕಾರಿಯವರ ಆದೇಶ ಸಂ.ಎಂ4/ಎಲ್‌ಎನ್‌ಡಿ/ ಸಿಆರ್/90/89-90 ದಿನಾಂಕ:27/04/1991ರ ಪ್ರಕಾರ ಕಂದಾಯ ಇಲಾಖೆಗೆ ವಾಪಸ್ಸು ಪಡೆಯಲಾಗಿದೆ. ಮೇಲ್ಕಂಡ ಸರ್ಕಾರಿ ಆದೇಶದ ಪ್ರಕಾರ ವಾಪಸ್ಸು ಪಡೆದಿರುವ ಜಮೀನನ್ನು ಸಾರ್ವಜನಿಕ ಉದ್ದೇಶಗಳಿಗೆ ಉಪಯೋಗಿಸಲು ಸೂಚನೆ ನೀಡಿರುವುದರಿಂದ ಮೆಗಾ ಫುಡ್ ಪಾರ್ಕ್ ನಿರ್ಮಾಣದ ಉದ್ದೇಶಕ್ಕಾಗಿ ಮಂಜೂರು ಮಾಡಲು ಅಗತ್ಯವಿರುವುದಾಗಿಯೂ, ಸರ್ಕಾರದಿಂದ ಪುನರ್ ಪರಿಶೀಲನೆಗಾಗಿ ವಾಪಸ್ಸು ಬಂದಿರುವ ಮೀಸಲು ಅರಣ್ಯ ರಚನೆ ಪ್ರಸ್ತಾವನೆಯನ್ನು ಕೈಬಿಡುವಂತೆಯೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತಿಳಿಸಲಾಗಿರುತ್ತದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

3. ಸದರಿ ಪ್ರಸ್ತಾವನೆಗೆ ಅರಣ್ಯ ಇಲಾಖೆಯ ಅಭಿಪ್ರಾಯ ಪಡೆಯಲಾಗಿ, ಆ ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

"ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿಕ್ಕಮಗಳೂರು ಅವರು, ತಮ್ಮ ವರದಿಯಲ್ಲಿ ಸದರಿ ಪ್ರದೇಶವು ಕರ್ನಾಟಕದ ಅರಣ್ಯ ಕಾಯಿದೆ 1964ರ ಕಲಂನಡಿಯಲ್ಲಿ ಮೀಸಲು ಅರಣ್ಯ ಎಂದು ರಚಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅಲ್ಲದೆ, ಈ ಜಮೀನಿನಲ್ಲಿ ಈಗಾಗಲೇ ನೆಡುತೋಪು ಇದ್ದು, ಸುಪ್ರೀಂ ಕೋರ್ಟ್ ಆದೇಶದಂತೆ ಇದು ಅರಣ್ಯವಾಗಿರುತ್ತದೆ.

ಆ ಪ್ರಯುಕ್ತ, ಈ ಪ್ರದೇಶವನ್ನು ಅರಣ್ಯ ಸಂರಕ್ಷಣಾ ಕಾಯಿದೆ 1980ರ ನಿಯಮದಂತೆ ಅರಣ್ಯೇತರ ಉದ್ದೇಶಗಳಿಗೆ ಈ ಪ್ರದೇಶವನ್ನು ಕೊಡಲು ಕೇಂದ್ರ ಸರ್ಕಾರದ ಅನುಮತಿ ಅಗತ್ಯ ಇರುತ್ತದೆ.

ಈ ಹಿನ್ನೆಲೆಯಲ್ಲಿ ಸದರಿ ಅರಣ್ಯ ಪ್ರದೇಶವನ್ನು ಮೇಲೆ ಹೇಳಿದ ಪ್ರಕ್ರಿಯೆಗಳನ್ನು ಅನುಸರಿಸದೆ ಅರಣ್ಯೇತರ ಉದ್ದೇಶಕ್ಕೆ ಬಿಡುಗಡೆ ಮಾಡಲು ಅವಕಾಶವಿರುವುದಿಲ್ಲ."

4. ಅರಣ್ಯ ಇಲಾಖೆಯು ನೀಡಿರುವ ಅಭಿಪ್ರಾಯದ ಹಿನ್ನೆಲೆಯಲ್ಲಿ ಸದರಿ ಸ್ಥಳ ಪರಿಶೀಲನೆ ನಡೆಸಿ, ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರನ್ನು ಕೋರಲಾಗಿ, ಅವರು ಈ ಕೆಳಕಂಡಂತೆ ವರದಿ ನೀಡಿರುತ್ತಾರೆ.

> "ಕದ್ರಿಮಿದ್ರಿ ಸರ್ವೆ ನಂಬರು 273 ರಲ್ಲಿ 90-00 ಎಕರೆ ಜಾಗದಲ್ಲಿ ಮೆ:ಯಗಚಿ ಫುಡ್ ಪಾರ್ಕ್ ಯೋಜನೆಗೆ, ಭೂ ವಿತರಣೆ ಮಾಡಲು ಪ್ರಸ್ತಾವನೆ ಈಗಾಗಲೇ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಸರ್ಕಾರದಿಂದ ದಿ:12.05.2009 ರಂದು ಬಂದಿರುವ ಪತ್ರದಲ್ಲಿ ಒಟ್ಟು ಎಷ್ಟು ವಿಸ್ತೀರ್ಣದಲ್ಲಿ ನೆಡುತೋಪು ಬೆಳೆದಿದ್ದಾರೆ? ಎಂಬ ಬಗ್ಗೆ ಸ್ಥಳ ತನಿಖೆ ಮಾಡಿ ವರದಿ ಮಾಡಲು ಕೋರಿದ್ದು ಒಟ್ಟು 90-00 ಎಕರೆ ಜಾಗದಲ್ಲಿ ಯೂಕಲಿಪ್ಟಸ್ ಸಸಿಗಳನ್ನು ಬೆಳೆದಿರುವುದನ್ನು ಗಮನಿಸಿದೆ. 1987ರಲ್ಲಿ ನೆಟ್ಟಿರುವ ಸಸಿಗಳಲ್ಲಿ ಬಹಳಷ್ಟು ಗಿಡಗಳು ಕಳುವಾಗಿದೆ. ಈಗ ಸುಮಾರು 10,000 ಸಂಖ್ಯೆ ಮರಗಳು ಇವೆ. ಸ್ಥಳದಲ್ಲಿ ಹಾಜರಿದ್ದ ಅರಣ್ಯ ಇಲಾಖೆ ಅಧಿಕಾರಿಗಳು ಈಗ ಮರಗಳ ಸಮೀಕ್ಷೆ ತೆಗೆದುಕೊಳ್ಳುತ್ತಿದ್ದು, ವರ್ಕಿಂಗ್ ಪ್ಲಾನ್ ವಿಭಾಗದವರು ಈ ವರ್ಷ ಈ ಮರಗಳನ್ನು ತೆಗೆಯಲು ಯೋಜನೆ ರೂಪಿಸಿರುವುದಾಗಿ ತಿಳಿಸಿದರು. ನೆಟ್ಟ ವರ್ಷದಿಂದ ಇಲ್ಲಿಯವರೆಗೆ ಮರಗಳನ್ನು ಒಂದುಬಾರಿಯೂ ತೆಗೆದಿಲ್ಲದಿರುವುದು ಕಂಡು ಬರುತ್ತದೆ. 120-00 ಎಕರೆಯಲ್ಲಿ ಈ ಪ್ರದೇಶ ಬಿಟ್ಟು ಉಳಿದ ಪ್ರದೇಶ ಅಧಿಕೃತ ಸಾಗುವಳಿಯಲ್ಲಿ ಇದ್ದು ಖುಷ್ಕಿ ಬೆಳೆಗಳನ್ನು ಬೆಳೆಯುತ್ತಿರುವುದಾಗಿ ತಿಳಿದು ಬಂದಿದೆ. ಭೂಮಿ ಸಾಧಾರಣವಾಗಿದ್ದು, ಅಲ್ಲಲ್ಲಿ ಕಲ್ಲುಗಳಿಂದ ಕೂಡಿದೆ. ಅರಣ್ಯ ಇಲಾಖೆಯವರು ನೆಡು ತೋಪುಗೆ ಸಂಬಂಧಿಸಿದಂತೆ ವರದಿ ಕೊಡುವುದಾಗಿ ತಿಳಿಸಿರುತ್ತಾರೆ".

5. ಜಿಲ್ಲಾಧಿಕಾರಿಗಳ ವರದಿ ಪ್ರಕಾರ ಸದರಿ ಜಮೀನು ಅನಧಿಕೃತ ಒತ್ತುವರಿಯಿಂದ ಮುಕ್ತವಾಗಿದ್ದು, ಯಾವುದೇ ಪ್ರಕರಣಗಳು ಜಮೀನಿನ ಬಗ್ಗೆ ನ್ಯಾಯಾಲಯದಲ್ಲಿ ಬಾಕಿ ಇರುವುದಿಲ್ಲ ಮತ್ತು ಈ ಜಮೀನಿನಲ್ಲಿ ಅರಣ್ಯ ಇಲಾಖೆ ವತಿಯಿಂದ ಬೆಳೆಸಿದ ನೆಡುತೋಪು ಇರುವುದರಿಂದ ಸದರಿ ಜಮೀನು ಮಂಜೂರು ಮಾಡುವಾಗ ಮರಗಳನ್ನು ಅರಣ್ಯ ಇಲಾಖೆಯ ನಿಯಮದ ಪ್ರಕಾರ ವಿಲೇ ಮಾಡುವ ಷರತ್ತು ವಿಧಿಸಬಹುದಾಗಿದೆ ಎಂದು ಜಿಲ್ಲಾಧಿಕಾರಿಗಳು ಅಭಿಪ್ರಾಯ ನೀಡಿರುತ್ತಾರೆ.

6. ಸದರಿ ಜಮೀನಿನ ಮಾರುಕಟ್ಟೆ ದರ ಎಕರೆ ಒಂದಕ್ಕೆ ಪರಿವರ್ತನಾ ಶುಲ್ಕ ಸೇರಿ ರೂ.43,560/– ಹಾಗೂ ವ್ಯವಸಾಯೇತರ ಜಮೀನಿನ ಮಾರುಕಟ್ಟೆ ಬೆಲೆಯು ಎಕರೆ ಒಂದಕ್ಕೆ ರೂ.83,560/– ಗಳಾಗಿರುವುದರಿಂದ ಬೆಲೆಯನ್ನು ಆಧರಿಸಿ ಈ ಜಮೀನಿನ ಗುತ್ತಿಗೆ ದರ ನಿಗದಿಪಡಿಸಬಹುದಾಗಿದೆ ಎಂದು ಜಿಲ್ಲಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ.

7. ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಮೆ:ಯಗಚಿ ಫುಡ್ ಟೆಕ್ನಾಲಜಿ ಪಾರ್ಕ್ ಪ್ರೈ. ಲಿ. ಬೆಂಗಳೂರು ಇವರು ದಿನಾಂಕ 27/01/2009ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿ, ಫುಡ್ ಪಾರ್ಕ್ ನಿರ್ಮಾಣಕ್ಕಾಗಿ 90–00 ಎಕರೆಗೆ ಬದಲಾಗಿ 78–00 ಎಕರೆ ಮಾತ್ರ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

8. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ದಿನಾಂಕ:03.01.1991ರ ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 106 ಎಲ್‌ಜಿಪಿ 1988ರ ಅನ್ವಯ ಅರಣ್ಯ ಇಲಾಖೆ ಮೀಸಲು ಅರಣ್ಯ ಎಂದು ಘೋಷಿಸಿರುವುದನ್ನು ಹೊರತು ಪಡಿಸಿ ಉಳಿದ ಸಿ & ಡಿ ವರ್ಗದ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾವಣೆ ಮಾಡಲಾಗಿದ್ದನ್ನು ಕಂದಾಯ ಇಲಾಖೆಗೆ Retransfer ಮಾಡಿಕೊಳ್ಳಲಾಗಿದೆ ಹಾಗೂ ಈ ಪ್ರದೇಶವು ಅಂತಿಮವಾಗಿ ಮೀಸಲು ಅರಣ್ಯ ಎಂದು ಘೋಷಿಸಿರುವ ಬಗ್ಗೆ ಮಾಹಿತಿ ಇಲ್ಲದಿರುವುದರಿಂದ ಮತ್ತು ಸದರಿ ಜಮೀನನ್ನು ದಿನಾಂಕ:03.01.1991ರ ಆದೇಶದ ಪ್ರಕಾರ ಅರಣ್ಯ ಇಲಾಖೆಯಿಂದ ಹಿಂದಕ್ಕೆ ಪಡೆದ ಜಮೀನಾಗಿರುವುದರಿಂದ, ಇದು ಕಂದಾಯ ಜಮೀನೆಂದು ಪರಿಗಣಿಸಿ, ಈ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಉದ್ದೇಶಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 37 ಎಲ್‌ಜಿಯು 2008 ಬೆಂಗಳೂರು, ದಿನಾಂಕ : 11–06–2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ಹೋಬಳಿ, ಕದ್ರಿಮಿದ್ರಿ ಗ್ರಾಮದ ಸ.ನಂ.273ರಲ್ಲಿನ 118.2 ಎಕರೆ ಸರ್ಕಾರಿ ಗೋಮಾಳದ ಜಮೀನಿನ ಪೈಕಿ ಅರಣ್ಯ ಇಲಾಖೆಯಿಂದ ಮೀಸಲು ಅರಣ್ಯ ಎಂದು ಘೋಷಿಸಿರುವ ಜಮೀನುಗಳನ್ನು ಹೊರತುಪಡಿಸಿ, ಇತರೆ ಸಿ & ಡಿ ಜಮೀನ್ನು ಕಂದಾಯ ಇಲಾಖೆಗೆ ಮರು ವರ್ಗಾಯಿಸಿಕೊಂಡಿರುವ ಜಮೀನುಗಳಲ್ಲಿ 78–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಪ್ರಚಲಿತ ಮಾರುಕಟ್ಟೆ ದರದ ಶೇ.10% ರಷ್ಟು ವಾರ್ಷಿಕ ಗುತ್ತಿಗೆ ದರ ನಿಗಧಿಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 19(1)(ಡಿ) ಮತ್ತು 19(2)(ಇ)ರಂತೆ ಮೆ:ಯಗಚಿ ಫುಡ್ ಟೆಕ್ನಾಲಜಿ ಪಾರ್ಕ್ ಪ್ರೈ. ಲಿ., ಬೆಂಗಳೂರು ರವರಿಗೆ ಫುಡ್ ಪಾರ್ಕ್ ಸ್ಥಾಪಿಸುವ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಿ ಆದೇಶಿಸಿದೆ:–

(ಅ) ಸದರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಮುನ್ನಾ ನೆಡುತೋಪು ಎಂಬುದರ ಬದಲಾಗಿ ಗುಂಡುತೋಪು ಎಂದು ತಪ್ಪಾಗಿ ಆರ್.ಟಿ.ಸಿ.ಯಲ್ಲಿ ದಾಖಲಾಗಿರುವುದನ್ನು ಸರಿಪಡಿಸಿ ಪೂರ್ವಸ್ಥಿತಿಗೆ ತರತಕ್ಕದ್ದು.

(ಆ) ಈ ಜಮೀನಿನಲ್ಲಿ ಅರಣ್ಯ ಇಲಾಖೆಯಿಂದ ಬೆಳೆಸಿದ ನೆಡುತೋಪುಗಳಲ್ಲಿರುವ ಮರಗಳನ್ನು ನಿಯಮಾನುಸಾರ ತೆರವುಗೊಳಿಸುವ ಷರತ್ತಿಗೆ ಒಳಪಟ್ಟಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸಮನ್ವಯ)

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ ೧, ಶಕ ವರ್ಷ ೧೯೩೧) | ನಂ. ೫೭೭ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/212/Bill/2009, Bangalore, Dated : 23rd July, 2009**

The following Bill was introduced in Legislative Assembly on 23rd July, 2009.

**THE KARNATAKA KHADI AND VILLAGE INDUSTRIES (AMENDMENT) BILL, 2009**

**(L.A. Bill No. 29 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 29)**

ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಅಧಿನಿಯಮ, 1956ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 7) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು **ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ಅಧಿನಿಯಮ, 2009** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 22ಎ ಪ್ರಕರಣದ ಪ್ರತ್ಯಾಯೋಜನೆ.-** ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ 7) 22ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"**22ಎ. ಮಂಡಲಿಗೆ ಬಾಕಿ ಇರುವ ಹಣವನ್ನು ಭೂ ಕಂದಾಯ ಬಾಕಿಯಂತೆ ವಸೂಲಿ ಮಾಡುವುದು.-** ವ್ಯಕ್ತವಾಗಿ ಅಥವಾ ಇಂಗಿತವಾಗಿ ಅಥವಾ ಅನ್ಯಥಾ ಮಾಡಿಕೊಂಡ ಒಪ್ಪಂದದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯಿಂದ ಮಂಡಲಿಗೆ ಸಂದಾಯವಾಗತಕ್ಕ ಯಾವುದೇ ಮೊಬಲಗನ್ನು ಗಡುವು ದಿನಾಂಕದಂದು ಅಥವಾ ಅದಕ್ಕೆ ಮೊದಲು ಆತ ಸಂದಾಯ ಮಾಡದಿದ್ದಲ್ಲಿ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಅಥವಾ ಈ ಸಂಬಂಧದಲ್ಲಿ ಮಂಡಲಿಯು ಅಧಿಕೃತಗೊಳಿಸಿದ ಯಾವೊಬ್ಬ ಇತರ ಅಧಿಕಾರಿಯು ಅಂಥ ವ್ಯಕ್ತಿಗೆ ತಗಾದೆ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಹದಿನೈದು ದಿನಗಳು ಕಳೆದ ಮೇಲೂ ಬಾಕಿಯಾಗಿಯೇ ಉಳಿದ ಯಾವುದೇ ಹಣವನ್ನು ಈ ಮುಂದಿನ ಯಾವುದೇ ಒಂದು ಅಥವಾ ಹೆಚ್ಚಿನ ವಿಧಾನದಲ್ಲಿ ವಸೂಲಿ ಮಾಡಬಹುದು, ಎಂದರೆ:-

(ಎ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಅಥವಾ ಈ ಸಂಬಂಧದಲ್ಲಿ ಮಂಡಲಿಯು ಅಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯು ತನ್ನ ಸಹಿ ಹಾಕಿ ಪ್ರಮಾಣೀಕರಿಸಿ ಮಂಡಲಿಗೆ ಬಾಕಿ ಇರುವ ಮೊಬಲಗನ್ನು ತಿಳಿಸಿ ವ್ಯವಹರಣೆಯನ್ನು ನಡೆಸಬೇಕಾದ ಯಾವುದೇ ಜಿಲ್ಲೆಯ ಜಿಲ್ಲಾಧಿಕಾರಿಗೆ ಲಿಖಿತ ಅರ್ಜಿಯನ್ನು ಸಲ್ಲಿಸಿದ ಮೇಲೆ ಭೂ ಕಂದಾಯದ ಬಾಕಿಯಂತೆ,

(ಬಿ) ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅಡಿಯಲ್ಲಿ ಅಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯು ಅಂಥ ವ್ಯಕ್ತಿಯ ಚರ ಅಥವಾ ಸ್ಥಿರ ಸ್ವತ್ತನ್ನು ಜಪ್ತಿ ಮಾಡಿ ಮಾರಾಟ ಮಾಡುವ ಮೂಲಕ.

- ವಸೂಲು ಮಾಡಬಹುದು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಪ್ರಸ್ತುತ, ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಮಂಡಲಿಯು ವಿವಿಧ ಯೋಜನೆಗಳ ಅಡಿಯಲ್ಲಿ ಮಂಜೂರು ಮಾಡಿದ ಸಾಲಗಳ ಮರುಪಾವತಿ ಮಾಡಲು ವಿಫಲರಾದವರು ರಾಜ್ಯ ಸರ್ಕಾರವು ರಚಿಸಿದ ನ್ಯಾಯ ಮಂಡಲಿಗೆ ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಅಧಿನಿಯಮ, 1956ರ 22ಎ ಪ್ರಕರಣದ ಅಡಿಯಲ್ಲಿ ಅರ್ಜಿ ಹಾಕಿಕೊಳ್ಳಬಹುದೆಂಬ ಉಪಬಂಧವಿದೆ. ಇದರಿಂದಾಗಿ ಮಂಡಲಿಗೆ ಮೊಬಲಗು ಸಂದಾಯ ಮಾಡುವ ವಿಷಯವು ವಿವಾದಕ್ಕೊಳಗಾದಾಗಲೆಲ್ಲಾ ಸಾಲ

ವಸೂಲಿಯಲ್ಲಿ ವಿಳಂಬವಾಗುತ್ತಿದೆ. ಆದ್ದರಿಂದ ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ಅಧಿನಿಯಮ, 1956ನ್ನು ಸೂಕ್ತವಾಗಿ ತಿದ್ದುಪಡಿ ಮಾಡಲು ಪ್ರಸ್ತಾಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಅಧಿನಿಯಮಕ್ಕೆ ಪ್ರಸ್ತಾವಿತ ತಿದ್ದುಪಡಿ ಮಾಡುವುದರಿಂದಾಗಿ ಯಾವುದೇ ಆರ್ಥಿಕ ಪರಿಣಾಮ ಉಂಟಾಗುವುದಿಲ್ಲ.

**ವೆಂಕಟರಮಣಪ್ಪ**
ಸಣ್ಣ ಕೈಗಾರಿಕೆ ಮತ್ತು ರೇಷ್ಮೆ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

**THE KARNATAKA KHADI AND VILLAGE INDUSTRIES (AMENDMENT) BILL, 2009**

**(L.A. Bill No. 29 of 2009)**

A Bill further to amend the Karnataka Khadi and Village Industries Act, 1956.

Whereas it is expedient further to amend the Karnataka Khadi and Village Industries Act, 1956 (Karnataka Act 7 of 1957) for the purposes hereinafter appearing;

Be it enacted by the Karnataka State Legislature in the Sixtieth year of the Republic of India, as follows:-

**1. Short title and Commencement.-** (1) This Act may be called the Karnataka Khadi and Village Industries (Amendment) Act, 2009.

(2) It shall come into force at once.

**2. Substitution of Section 22-A.-** In the Karnataka Khadi and Village Industries Act, 1956 (Karnataka Act 7 of 1957) for Section 22-A, the following shall be substituted, namely:-

"**22-A. Recovery of moneys due to the Board as arrears of land revenue.-** (1) Where any sum payable to the Board under any agreement, express or implied or otherwise, however, by any person, is not paid on or before the due date and remaining in arrears after fifteen days from the date of service of a notice of demand on such person by the Chief Executive Officer or any other officer authorised by the Board in that behalf, may be recovered in any one or more of the following ways namely:-

(a) as an arrear of land revenue, on the written application of Chief Executive Officer or any officer authorised by the Board in this behalf certifying under his hand indicating the sum due to the Board to the Deputy Commissioner of any district in which proceedings are required to be taken.

(b) by destraint and sale of the movable and immovable property of such person by any Officer authorised under the Karnataka Land Revenue Act 1964 and rules made thereunder."

**STATEMENT OF OBJECTS AND REASONS**

Under Section 22-A of Karnataka Khadi and Village Industries Act, 1956, there is a provision for the defaulters of loan sanctioned by the Karnataka Khadi and Village Industries Board under various schemes to approach the Tribunal constituted by the State Government, if the question arises, as to

whether a sum is payable to the Board is under dispute which is causing delay in recovery of loan. Hence, suitable amendments to the Karnataka Khadi and Village Industries Act, 1956 has been proposed.

Hence, the Bill.

**FINANCIAL MEMORANDUM**

There is no financial implications by the proposed amendment to the Act.

**VENKATARAMANAPPA**
Minister for Small Scale Industries
and Sericulture

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ ೧, ಶಕ ವರ್ಷ ೧೯೩೧) | ನಂ. ೫೭೮ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/229/Bill/2009, Bangalore, Dated : 23rd July, 2009**

The following Bill was introduced in Legislative Assembly on 23rd July, 2009.

**THE KARNATAKA STATE UNIVERSITIES (AMENDMENT) BILL, 2009**

**(L.A. Bill No. 33 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 33)**

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದ (2001ರ ಕರ್ನಾಟಕ ಅಧಿನಿಯಮ 29) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,-

(1) (ಡಿ) ಖಂಡದಲ್ಲಿ, "ಚಿತ್ರದುರ್ಗ, ದಾವಣಗೆರೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) (1ಬಿ) ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(1ಸಿ) ದಾವಣಗೆರೆಯಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ್ದು ದಾವಣಗೆರೆ ಹಾಗೂ ಚಿತ್ರದುರ್ಗ ಜಿಲ್ಲೆಗಳ ಅಧಿಕಾರ ಕ್ಷೇತ್ರ ವ್ಯಾಪ್ತಿಯನ್ನು ಹೊಂದಿರುವ ದಾವಣಗೆರೆ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು."

**3. 5ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ (3)ನೇ ಉಪಪ್ರಕರಣದ ತರುವಾಯ ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

"(4) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಸ್ಥಾಪನೆಗೊಂಡ ಯಾವುದೇ ಕಾಲೇಜು ಅಥವಾ ಶೈಕ್ಷಣಿಕ ಸಂಸ್ಥೆಯು, ಕುವೆಂಪು ವಿಶ್ವವಿದ್ಯಾನಿಲಯದಿಂದ ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರವನ್ನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಕುವೆಂಪು ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಈ ಹಿಂದೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ, ಎಲ್ಲ ಅಂಥ ಕಾಲೇಜುಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು ದಾವಣಗೆರೆ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆದುಕೊಂಡಿವೆ ಎಂದು ಅಥವಾ ಅದಕ್ಕೆ ಸಂಯೋಜಿತವಾಗಿವೆ ಎಂದು ಭಾವಿಸತಕ್ಕದ್ದು."

**4. 14ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 14ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣದ ನಾಲ್ಕನೇ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಈ ಪ್ರಕರಣದಲ್ಲಿ ವಿರುದ್ಧವಾದುದು ಏನೇ ಇದ್ದರೂ, ರಾಜ್ಯ ಸರ್ಕಾರವು, ತಾನು ನಿರ್ದಿಷ್ಟಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ದಾವಣಗೆರೆ ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಯವರನ್ನು ನೇಮಕಮಾಡತಕ್ಕದ್ದು."

**5. ವಿಶೇಷಾಧಿಕಾರಿಯ ಅಧಿಕಾರಗಳು.-** ದಾವಣಗೆರೆ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಕ್ರಮ ಕೈಗೊಳ್ಳುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಕಮಾಡಿದ ವಿಶೇಷಾಧಿಕಾರಿಯು, ಪ್ರಥಮ ಕುಲಪತಿಯವರ ನೇಮಕವಾಗುವವರೆಗೆ, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿಶ್ವವಿದ್ಯಾನಿಲಯದ ಮತ್ತು ಕುಲಪತಿಯವರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**6. ಪ್ರಥಮ ಕುಲಪತಿಯವರ ಕರ್ತವ್ಯಗಳು.-** (1) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದಿಂದ ಆರು ತಿಂಗಳುಗಳೊಳಗೆ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂತೆ ಒಂದು ವರ್ಷಕ್ಕೆ ಮೀರದಂಥ ದೀರ್ಘ ಅವಧಿಯೊಳಗೆ, ದಾವಣಗೆರೆ ವಿಶ್ವವಿದ್ಯಾನಿಲಯದ ಸಿಂಡಿಕೇಟ್, ವಿದ್ಯಾವಿಷಯಕ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳ ರಚನೆಗಾಗಿ ಏರ್ಪಾಡುಗಳನ್ನು ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಈ ಸಂಬಂಧದಲ್ಲಿ ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ತಮ್ಮ ಪ್ರಕಾರ್ಯಗಳನ್ನು ಚಲಾಯಿಸಲು ಪ್ರಾರಂಭಿಸತಕ್ಕದ್ದು.

**7. ತಾತ್ಕಾಲಿಕ ಉಪಬಂಧಗಳು.-** (1) ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಏನೇ ಇದ್ದರೂ, ಪ್ರಥಮ ಕುಲಪತಿಯವರು, ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ದಾವಣಗೆರೆ ವಿಶ್ವವಿದ್ಯಾನಿಲಯದ ಎಲ್ಲಾ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಲಾದಂತೆ ವಿಶ್ವವಿದ್ಯಾನಿಲಯದ ಯಾವುದೇ ಪ್ರಾಧಿಕಾರವು, ಚಲಾಯಿಸಬೇಕಾಗಿದ್ದ ಅಥವಾ ನಿರ್ವಹಿಸಬೇಕಾಗಿದ್ದ ಯಾವುವೇ ಅಧಿಕಾರವನ್ನು ಅಥವಾ ಕರ್ತವ್ಯವನ್ನು, ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಿರುವಂತೆ ಅದು ಅಸ್ತಿತ್ವಕ್ಕೆ ಬರುವವರೆಗೆ, ಚಲಾಯಿಸಬಹುದು ಅಥವಾ ನಿರ್ವಹಿಸಬಹುದು.

(2) ಮೂಲ ಅಧಿನಿಯಮದ 5ನೇ ಪ್ರಕರಣದ ಅಡಿಯಲ್ಲಿ ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸಲಾದ ಕಾಲೇಜುಗಳಿಗೆ ಅಥವಾ ಇತರ ಶಿಕ್ಷಣ ಸಂಸ್ಥೆಗಳಿಗೆ ಅನ್ವಯವಾಗತಕ್ಕ ಕುವೆಂಪು ವಿಶ್ವವಿದ್ಯಾನಿಲಯವು ರಚಿಸಿದ ಎಲ್ಲ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳನ್ನು ದಾವಣಗೆರೆ ವಿಶ್ವವಿದ್ಯಾನಿಲಯವು ರಚಿಸಿದ

ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳೆಂದು ಭಾವಿಸತಕ್ಕದ್ದು ಮತ್ತು ಅವು ದಾವಣಗೆರೆ ವಿಶ್ವವಿದ್ಯಾನಿಲಯವು ತನ್ನದೇ ಆದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಅಥವಾ ನಿಯಮಗಳನ್ನು ರಚಿಸುವವರೆಗೆ ಹಾಗೆಯೇ ಮುಂದುವರಿಯತಕ್ಕದ್ದು:

ಪರಂತು, ಕುಲಪತಿಯವರು, ಕುಲಾಧಿಪತಿಯವರ ಅನುಮೋದನೆಯೊಡನೆ ತಾವು ಅವಶ್ಯಕವೆಂದು ಪರಿಗಣಿಸಬಹುದಾದಂಥ ಮಾರ್ಪಾಡುಗಳನ್ನು ಅಥವಾ ಅಳವಡಿಕೆಗಳನ್ನು ಅದರಲ್ಲಿ ಮಾಡಬಹುದು.

**8. ಕೆಲವು ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಉಳಿಸುವಿಕೆ.–** ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಅಥವಾ ತಿದ್ದುಪಡಿ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳಲ್ಲಿ, ಆರ್ಡಿನೆನ್ಸ್‌ಗಳಲ್ಲಿ, ವಿನಿಯಮಗಳಲ್ಲಿ ಅಥವಾ ನಿಯಮಗಳಲ್ಲಿ ಏನೇ ಇದ್ದರೂ,–

(ಎ) ಜಾರಿಯಲ್ಲಿರುವ ಪರಿನಿಯಮಗಳಿಗೆ, ಆರ್ಡಿನೆನ್ಸ್‌ಗಳಿಗೆ, ವಿನಿಯಮಗಳಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ಕುವೆಂಪು ವಿಶ್ವವಿದ್ಯಾನಿಲಯದ ಪದವಿಗಾಗಿ ವ್ಯಾಸಂಗ ಮಾಡುತ್ತಿರುವ ಯಾವೊಬ್ಬ ವಿದ್ಯಾರ್ಥಿಯು, ದಾವಣಗೆರೆ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಕುವೆಂಪು ವಿಶ್ವವಿದ್ಯಾನಿಲಯದ ಪರೀಕ್ಷೆಗೆ ಪ್ರವೇಶ ಪಡೆಯತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವನು ಅರ್ಹನಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವನಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಕುವೆಂಪು ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿದ್ದು, ಅದರ ಫಲಿತಾಂಶವು ಪ್ರಕಟವಾಗಿ ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಅಂಥ ಯಾವುದೇ ಪರೀಕ್ಷೆಯ ಫಲಿತಾಂಶವನ್ನು ಕುವೆಂಪು ವಿಶ್ವವಿದ್ಯಾನಿಲಯವು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಕುವೆಂಪು ವಿಶ್ವವಿದ್ಯಾನಿಲಯವು ನಡೆಸಿದೆ ಎಂದು ಭಾವಿಸತಕ್ಕದ್ದು.

**9. ತೊಂದರೆಗಳ ನಿವಾರಣೆ.–** ತಿದ್ದುಪಡಿ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಸೂಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧವನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ರಚಿಸಬಹುದು:

ಪರಂತು, ಈ ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿ ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

ಉನ್ನತ ಶಿಕ್ಷಣ ಸೌಲಭ್ಯವನ್ನು ಮತ್ತಷ್ಟು ವಿಸ್ತರಿಸುವುದಕ್ಕಾಗಿ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಅಧಿಕಾರ ಕ್ಷೇತ್ರ ವ್ಯಾಪ್ತಿಯಿರುವಂತೆ ವಿದ್ಯಾರ್ಥಿಗಳಿಗೆ ಅನುಕೂಲವನ್ನು ಕಲ್ಪಿಸುವುದಕ್ಕಾಗಿ ದಾವಣಗೆರೆಯನ್ನು ಕೇಂದ್ರ ಕಾರ್ಯ ಸ್ಥಾನವಾಗಿ ಉಳ್ಳ ಒಂದು ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದು ಅವಶ್ಯ ಮತ್ತು ಯುಕ್ತವೆಂದು ಪರಿಗಣಿಸಲಾಗಿದೆ. ಬದಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ ದಾವಣಗೆರೆ ವಿಶ್ವವಿದ್ಯಾನಿಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯನ್ನು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿಗೆ ಸೀಮಿತಗೊಳಿಸಿ, ಪುನರ್ ನಿಗದಿಪಡಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ 2009–10ನೇ ವರ್ಷದಲ್ಲಿ ಸುಮಾರು ಹತ್ತು ಕೋಟಿ ರೂಪಾಯಿಗಳ ವೆಚ್ಚ ಉಂಟಾಗುತ್ತದೆ.

**ಅರವಿಂದ ಲಿಂಬಾವಳಿ**
ಉನ್ನತ ಶಿಕ್ಷಣ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

## ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ 29) ಉದ್ಧೃತ ಭಾಗಗಳು

XX XX XX

**3. ವಿಶ್ವವಿದ್ಯಾನಿಲಯಗಳ ಸ್ಥಾಪನೆ ಮತ್ತು ನಿಗಮನ.–** (1) 1976ರ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾನಿಲಯಗಳನ್ನು, ಇದರಲ್ಲಿ ಇನ್ನು ಮುಂದೆ ಉಪಬಂಧಿಸಲಾದಂತೆ, ಅವುಗಳ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯೊಡನೆ, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾನಿಲಯಗಳೆಂದು ಭಾವಿಸತಕ್ಕದ್ದು, ಎಂದರೆ:–

(ಎ) ಬೆಂಗಳೂರಿನಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ ಮತ್ತು ಬೆಂಗಳೂರು ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಕೋಲಾರ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಬೆಂಗಳೂರು ವಿಶ್ವವಿದ್ಯಾನಿಲಯ;

(ಬಿ) ಗುಲಬರ್ಗಾದಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ ಮತ್ತು ಬಳ್ಳಾರಿ, ಬೀದರ್, ಗುಲಬರ್ಗಾ, ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಗುಲಬರ್ಗಾ ವಿಶ್ವವಿದ್ಯಾನಿಲಯ;

(ಸಿ) ಧಾರವಾಡದಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ ಮತ್ತು ಬಾಗಲಕೋಟೆ, ಬೆಳಗಾವಿ, ವಿಜಾಪುರ, ಧಾರವಾಡ, ಗದಗ, ಹಾವೇರಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಕರ್ನಾಟಕ ವಿಶ್ವವಿದ್ಯಾನಿಲಯ;

(ಡಿ) ಶಂಕರಘಟ್ಟದಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ ಮತ್ತು ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಕುವೆಂಪು ವಿಶ್ವವಿದ್ಯಾನಿಲಯ;

(ಇ) ಮಂಗಳೂರು ತಾಲ್ಲೂಕಿನ ಕೊಣಾಜೆಯಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿದ ಮತ್ತು ದಕ್ಷಿಣ ಕನ್ನಡ, ಕೊಡಗು ಮತ್ತು ಉಡುಪಿ ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮಂಗಳೂರು ವಿಶ್ವವಿದ್ಯಾನಿಲಯ;

(ಎಫ್) ಮೈಸೂರಿನಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ ಮತ್ತು ಚಾಮರಾಜನಗರ, ಹಾಸನ, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳ ಪ್ರದೇಶದ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮೈಸೂರು ವಿಶ್ವವಿದ್ಯಾನಿಲಯ.

(1ಎ) ಮಹಿಳೆಯರು ಕಲಿಕೆ ಮುಂದುವರಿಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆ ನಡೆಸುವುದರ ಪುರೋಭಿವೃದ್ಧಿಗಾಗಿ, ಬಿಜಾಪುರದಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ್ದು, ರಾಜ್ಯದಲ್ಲಿರುವ ಮಹಿಳಾ ಕಾಲೇಜುಗಳ ಮತ್ತು ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಗಳ ಮೇಲೆ ಪ್ರಾದೇಶಿಕ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಒಂದು ಮಹಿಳಾ ವಿಶ್ವವಿದ್ಯಾನಿಲಯವನ್ನು ರಾಜ್ಯದಲ್ಲಿ ಸ್ಥಾಪಿಸತಕ್ಕದ್ದು:

ಪರಂತು, ಸಂಯೋಜನೆ ನೀಡುವ ಉದ್ದೇಶಕ್ಕಾಗಿ, ಪ್ರಾದೇಶಿಕ ಅಧಿಕಾರ ವ್ಯಾಪ್ತಿಯು, ಬಾಗಲಕೋಟೆ, ಬೆಳಗಾವಿ, ಬಳ್ಳಾರಿ, ಬೀದರ್, ಬಿಜಾಪುರ, ಧಾರವಾಡ, ಗದಗ, ಗುಲ್ಬರ್ಗಾ, ಹಾವೇರಿ, ಕೊಪ್ಪಳ, ರಾಯಚೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿರುವ ಮಹಿಳಾ ಕಾಲೇಜುಗಳಿಗೆ ಮತ್ತು ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಗಳಿಗೆ ವಿಸ್ತರಿಸತಕ್ಕದ್ದು.

(1ಬಿ) ತುಮಕೂರಿನಲ್ಲಿ ಕೇಂದ್ರ ಕಾರ್ಯ ಸ್ಥಾನವನ್ನು ಹೊಂದಿದ್ದು ಮತ್ತು ತುಮಕೂರು ಜಿಲ್ಲೆ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ತುಮಕೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು.

(2) (i) ಪ್ರತಿಯೊಂದು ವಿಶ್ವವಿದ್ಯಾನಿಲಯದ ಕುಲಾಧಿಪತಿ, ಸಹ-ಕುಲಾಧಿಪತಿ (ಪ್ರೊಚಾನ್ಸ್‌ಲರ್), ಕುಲಪತಿ ಮತ್ತು ವಿದ್ಯಾವಿಷಯಕ ಪರಿಷತ್ತು ಮತ್ತು ಸಿಂಡಿಕೇಟಿನ ಸದಸ್ಯರು, (1)ನೇ ಉಪ ಪ್ರಕರಣದಲ್ಲಿ ಅಥವಾ (1ಎ) ಉಪಪ್ರಕರಣದಲ್ಲಿ ಅಥವಾ (1ಬಿ) ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಆ ವಿಶ್ವವಿದ್ಯಾನಿಲಯದ ಹೆಸರಿನಿಂದ ಕರೆಯಲ್ಪಡುವ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು;

(ii) ಅಂಥ ಪ್ರತಿಯೊಂದು ವಿಶ್ವವಿದ್ಯಾನಿಲಯವೂ ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮುದ್ರೆಯನ್ನು ಹೊಂದಿರತಕ್ಕದ್ದು ಮತ್ತು ಅದರ ಹೆಸರಿನಿಂದ ಅದು ದಾವೆ ಹೂಡಬಹುದು ಮತ್ತು ದಾವೆಗೆ ಗುರಿಯಾಗಬಹುದು.

(3) ವಿಶ್ವವಿದ್ಯಾನಿಲಯವು, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸಲು ಮತ್ತು ಧಾರಣ ಮಾಡಲು, ವಿಶ್ವವಿದ್ಯಾನಿಲಯದ ಉದ್ದೇಶಗಳಿಗಾಗಿ ಅದರಲ್ಲಿ ನಿಹಿತವಾಗಿರಬಹುದಾದ ಅಥವಾ ಅದರಿಂದ ಆರ್ಜಿತವಾಗಿರಬಹುದಾದ ಯಾವುದೇ ಚರ ಮತ್ತು ಸ್ಥಿರ ಸ್ವತ್ತನ್ನು ಗುತ್ತಿಗೆಗೆ ಕೊಡಲು, ಮಾರಾಟ ಮಾಡಲು ಅಥವಾ ಅನ್ಯಥಾ ವರ್ಗಾವಣೆ ಮಾಡಲು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ಕರಾರು ಮಾಡಿಕೊಳ್ಳುವುದಕ್ಕೆ ಮತ್ತು ಅವಶ್ಯವಾದ ಇತರ ಎಲ್ಲ ಕಾರ್ಯಗಳನ್ನೂ ಮಾಡುವುದಕ್ಕೆ ಸಕ್ಷಮವಾಗಿರತಕ್ಕದ್ದು.

(4) ವಿಶ್ವವಿದ್ಯಾನಿಲಯದಲ್ಲಿ ನಿಹಿತವಾಗಿರಬಹುದಾದ ಅಥವಾ ಅದು ಆರ್ಜಿಸಿರಬಹುದಾದ ಯಾವುದೇ ಸ್ಥಿರ ಸ್ವತ್ತನ್ನು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದುಕೊಳ್ಳದೆ ಗುತ್ತಿಗೆ, ಮಾರಾಟ ಅಥವಾ ಅನ್ಯಥಾ ವರ್ಗಾವಣೆ ಮಾಡತಕ್ಕದ್ದಲ್ಲ.

(5) ವಿಶ್ವವಿದ್ಯಾನಿಲಯದಿಂದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ, ವಾದಪತ್ರಗಳಿಗೆ ರಿಜಿಸ್ಟ್ರಾರರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂತಹ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲ ಆದೇಶಿಕೆಗಳನ್ನು ರಿಜಿಸ್ಟ್ರಾರರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

XX XX XX

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

## THE KARNATAKA STATE UNIVERSITIES (AMENDMENT) BILL, 2009

**(L.A. Bill No. 33 of 2009)**

A Bill further to amend the Karnataka State Universities Act, 2000.

Whereas, it is expedient further to amend the Karnataka State Universities Act, 2000 (Karnataka Act 29 of 2001) for the purposes hereinafter appearing;

Be it enacted by the Karnataka Legislature in the sixtieth year of the Republic of India, as follows:-

**1. Short Title and Commencement**.- (1) This Act may be called the Karnataka State Universities (Amendment) Act, 2009.

(2) It shall come into force on such date as the State Government may, by notification, appoint .

**2. Amendment of Section 3.-** In section 3 of the Karnataka State Universities Act, 2000 (Karnataka Act 29 of 2001) (hereinafter referred to as the principal Act), in Sub-Section(1),-

(1) In clause (d), the words "Chitradurga, Davanagere" shall be omitted.

(2) After sub-section (1B), the following shall be inserted, namely:-

"(1C) There shall be established the Davanagere University with headquarters at Davanagere and territorial jurisdiction extending over the districts of Davanagere and Chitradurga".

**3. Amendment of Section 5.-** In Section 5 of the Principal Act after sub-section (3), the following shall be inserted, namely:-

"(4) Any privilege enjoyed from the Kuvempu University by the colleges or educational institutions situated in Chitradurga and Davanagere districts before the date of commencement of the Karnataka State Universitites (Amendment) Act, 2009 shall, with effect from such date as may be specified by the State Government in this behalf, be deemed to be withdrawn and all such colleges or educational institutions previously admitted to the privileges of, or affiliated to, the Kuvempu University shall be deemed to be admitted to the privileges of, or affiliated to, the Davanagere University."

